# 'ನಮ್ಮ ನಡುವಿನ ಗೋಡೆ'

## ಕಥಾಸಂಗ್ರಹ

ಕತೆಗಾರರು:

**ಶಿವೇಶ್ವರ ದೊಡ್ಡಮನಿ**
**ಚೆನ್ನವೀರ ಕಣವಿ**
**ನಿರಂಜನ**

1951

**ಪುರೋಗಾಮಿ ಪ್ರಕಾಶನ**

**ಚಾಮರಾಜಪೇಟೆ** **ಬೆಂಗಳೂರು-೨**

ಮೊದಲನೆ ವರ್ಷದ ಎರಡನೆ ಪ್ರಕಟಣೆ

**ಪುರೋಗಾಮಿ ಪ್ರಕಾಶನ**
**ಮೇ ತಿಂಗಳಿಂದ ವರ್ಷಾರಂಭ**
**ವರ್ಷಕ್ಕೆ ಆರು ಪ್ರಕಟಣೆಗಳು**
**ಒಟ್ಟು ಪುಟಸಂಖ್ಯೆ ೬೦೦ಕ್ಕೂ ಮಿಕ್ಕಿ**
**ವಾರ್ಷಿಕ ಚಂದಾ ರೂ. ೬-೧೨-೦**
ಸಂಪಾದಕರು:
**ನಿರಂಜನ ಮತ್ತು ವಾಸುದೇವ**

ಮುದ್ರಕರು:
**ಬಿ. ಕೃಷ್ಣ** ಬಿ.ಎ., ಬಿ.ಟಿ.,
**ಪಬ್ಲಿಷರ್ಸ್ ಅಂಡ್ ಅಡ್ವರ್ಟೈಸರ್ಸ್ ಲಿಮಿಟೆಡ್**
**ಚಾಮರಾಜಪೇಟೆ, ಬೆಂಗಳೂರು-೨**

ಪ್ರಕಾಶಕರು:
**ಕುಳುಕುಂದ ಶಿವರಾಯ**
**ಪುರೋಗಾಮಿ ಪ್ರಕಾಶನ**
**೧೬, ೩ನೆ ರಸ್ತೆ**
**ಚಾಮರಾಜಪೇಟೆ, ಬೆಂಗಳೂರು-೨**

ಮುಂಬಯಿ ಕಾರ್ಯಾಲಯ:
**ವಾಸುದೇವ**
**೨೦, ದೌಲತ್ ಭವನ**
**೪೦೭, ಕಾಲ್ಬಾದೇವಿ ರಸ್ತೆ**
**ಮುಂಬಯಿ-೧.**

**ಈ ಪುಸ್ತಕದ ಬೆಲೆ:**
**ಒಂದು ರೂಪಾಯಿ ಎರಡಾಣೆ**

ಪ್ರಕಾಶನದ ಮುಂದಿನ ಪ್ರಕಟಣೆ :

ಇಪ್ಪತ್ತನೆ ಶತಮಾನದ
ಪೂರ್ವಾರ್ಧದಲ್ಲಿ
ವಿಶ್ವ ಸಾಹಿತ್ಯದಲ್ಲೇ
ಅಲ್ಲೋಲಕಲ್ಲೋಲವನ್ನುಂಟು
ಮಾಡಿ ಮಡಿದ

**ಅಮೆರಿಕದ ಮಹಾ ಸಾಹಿತಿ**

# ಜಾಕ್ ಲಂಡನ್

## ಜೀವನ ಮತ್ತು ಕೃತಿ ವಿಮರ್ಶೆ

★ ಆತನ ಕೃತಿಗಳ ಕೆಲವಂಶ
★ ಆತನ ಬಗ್ಗೆ ಕನ್ನಡದ ಸುಪ್ರಸಿದ್ಧ ಲೇಖಕರು ಬರೆದಿರುವ ಪ್ರತಿಭಾಪೂರ್ಣ ಲೇಖನಗಳು

**ಕನ್ನಡ ಸಾಹಿತ್ಯಕ್ಕೇ**
**ಇದೊಂದು ಅಮೂಲ್ಯ ಕಾಣಿಕೆ**

೧೦೦ ಪುಟಗಳಿಗೂ
ಮಿಕ್ಕಿದ ಉತ್ಕೃಷ್ಟ ಗ್ರಂಥ

ಸಂಗಾತಿ ಶಿವೇಶ್ವರರ
ಚಿರಸ್ಮರಣೆಗೆ



**ಶಿವೇಶ್ವರ ದೊಡ್ಡಮನಿ**

ಜನನ ೭ ಮೇ ೧೯೩೫ ಮರಣ ೨೬ ಮಾರ್ಚ್ ೧೯೫೦

# ಪರಿವಿಡಿ



## ಶಿವೇಶ್ವರ ದೊಡ್ಡಮನಿ



## ಚೆನ್ನವೀರ ಕಣವಿ



## ನಿರಂಜನ

# ಈ ಲೇಖಕರ
# ಇತರ ಕೃತಿಗಳು

★ **ಶಿವೇಶ್ವರ ದೊಡ್ಡಮನಿ**

ಸ್ವಂತ ಗೀತಗಳು

ಜನಪದ ಗೀತ ಸಂಗ್ರಹ

[ಪ್ರಕಟವಾಗಲಿವೆ]

★ **ಚೆನ್ನವೀರ ಕಣವಿ**

ಕಾವ್ಯಾಕ್ಷಿ

ಭಾವಜೀವಿ

—ಕಾವ್ಯ ಕೃತಿಗಳು

★ **ನಿರಂಜನ**

ಐ. ಎನ್. ಎ.

ಸಂಧಿಕಾಲ

[ಐ.ಎನ್.ಎ. ಪುನರ್ಮುದ್ರಣ]

ರಕ್ತ ಸರೋವರ

— ಕಥಾ ಸಂಗ್ರಹಗಳು

# ಪ್ರಕಾಶನದ ಪರವಾಗಿ

ಪ್ರಿಯ ಓದುಗ,

ನಮ್ಮ ಪ್ರಕಾಶನದ ಎರಡನೆ ಪ್ರಕಟಣೆಯನ್ನು ನಿಮ್ಮ ಕೈಗೊಪ್ಪಿಸಲು ಸಂತೋಷವಾಗುತ್ತಿದೆ.

ಪುರೋಗಾಮಿ ಪ್ರಕಾಶನಕ್ಕೆ ಕನ್ನಡ ನಾಡಿನ ನಾನಾ ಕಡೆಗಳಿಂದ ದೊರೆತಿರುವ ಸ್ವಾಗತ, ಪರಿಚಿತರೂ ಅಪರಿಚಿತರೂ ತೋರಿರುವ ಆದರ, ನಮ್ಮನ್ನು ಉತ್ತೇಜಿತರನ್ನಾಗಿ ಮಾಡಿವೆ. ಚಂದಾದಾರರ ಆಜೀವ ಸದಸ್ಯರ ಬೆಳೆಯುತ್ತಲಿರುವ ಬಳಗ, ಪ್ರಕಾಶನವು ಭದ್ರ ತಳಹದಿಯ ಮೇಲೆ ನಿಲ್ಲಲು ನೆರವಾಗಿದೆ.

ಕೆಲವು ದಿನಗಳ ಹಿಂದೆ ಧಾರವಾಡದ ಮನೋಹರ ಗ್ರಂಥ ಮಾಲೆಯ ಒಡೆಯರಾದ ಶ್ರೀ ಜಿ. ಬಿ. ಜೋಶಿಯವರನ್ನು ಕಂಡಿದ್ದೆ. ಅವರದಾದರೋ, ನಮ್ಮ ನಾಡಿನ ಪ್ರಮುಖ ಪ್ರಕಾಶನ ಸಂಸ್ಥೆ. ಕನ್ನಡ ಪುಸ್ತಕ ಪ್ರಕಾಶನದಲ್ಲಿ ಹೆದ್ದಾರಿಯನ್ನು ತುಳಿದವರು ಅವರು. ತಮ್ಮ ಆಳವಾದ ಅನುಭವದ ಹಿನ್ನೆಲೆಯಲ್ಲಿ ಅವರೊಂದು ಮಾತು ಹೇಳಿದರು:

"ಐದು ವರ್ಷ ಕಷ್ಟಪಟ್ಟು ಪ್ರಕಾಶನವನ್ನು ನಡೆಸಿಕೊಂಡು ಬನ್ನಿ. ಮುಂದೆ ಎಲ್ಲವೂ ಸರಿಹೋಗುವುದು."

ಕಷ್ಟಪಡುವುದಕ್ಕೆ ನಾವು ಸಿದ್ಧರೇ! ಹೇಳಿ ಕೇಳಿ ನಾವು ಆಶಾವಾದಿಗಳು!

ಆದರೆ ಸುಹೃದಯಿ ಓದುಗ— ನಿಮ್ಮ ಹೆಚ್ಚಿನ ನೆರವು ಸಹಕಾರದಿಂದ ಆದಷ್ಟು ಬೇಗನೆ ಪುರೋಗಾಮಿ ಪ್ರಕಾಶನವನ್ನು ಒಂದು ಪ್ರಬಲ ಸಂಸ್ಥೆಯಾಗಿ ಮಾಡುವುದು ಸಾಧ್ಯವಿಲ್ಲ ಎನ್ನುವಿರಾ? ನಿಮ್ಮಿಂದ ನಾವು ಎಷ್ಟನ್ನೋ ನಿರೀಕ್ಷಿಸುತ್ತೇವೆ. ನೀವು ಪ್ರತಿಯೊಬ್ಬರೂ ಒಬ್ಬೊಬ್ಬ ಚಂದಾದಾರರನ್ನು [ರೂ. ೬-೧೨-೦ ವಾರ್ಷಿಕ ವರ್ಗಣಿ] ಒದಗಿಸಿಕೊಡಿ; ಬೇಗನೆ ಒದಗಿಸಿ

ಕೊಡಿ. ಇದೀಗ ನೀವು ಪ್ರಕಾಶನಕ್ಕೋಸ್ಕರ ಮಾಡಬಹುದಾದ ಮಾಡ ಬೇಕಾದ ಮೊದಲ ಕೆಲಸ."

ನಮ್ಮಮಟ್ಟಿಗೆ ಹೇಳುವುದಾದರೆ, ಒಂದಲ್ಲ ಒಂದು ರೀತಿಯ ಎಡರು ತೊಡರು ಬಂದೇ ಬರಬಹುದು. ಎಂಥ ಪ್ರಮೇಯವನ್ನು ಇದಿರಿಸುವುದಕ್ಕೂ ಬೆಂಗಳೂರಿನ ಕಚೇರಿಯೂ ಮುಂಬಯಿಯ ಶಾಖಾ ಕಾರ್ಯಾಲಯವೂ ಸಿದ್ಧವಿದೆ.

ಈ ಸಲದ ಪ್ರಕಟಣೆಯ ಬಗೆಗೆ ಪರಿಚಯವನ್ನು ವಾಸುದೇವರು ಮುಂದೆ ಬರೆದಿದ್ದಾರೆ.

ಉಳಿದಿರುವುದು ಉಪಕಾರ ಸ್ಮರಣೆಯ ಒಂದು ಮಾತು.

ಈ ಸಲದ ಪ್ರಕಟಣೆಯ ಕಾರ್ಯದಲ್ಲಿ ನೆರವಾಗಿರುವ ಶ್ರೀ ಚೆನ್ನವೀರ ಕಣವಿಯವರಿಗೆ, ಹಲವಾರು ವಿಧದಲ್ಲಿ ಸಹಾಯ ನೀಡಿರುವ ಶ್ರೀ ಬಿ. ಕೃಷ್ಣ ರವರಿಗೆ- ಹೊದಿಕೆಯ ಚಿತ್ರ ಬರೆದಿರುವ ಶ್ರೀಮತಿ ಕಲಾರವರಿಗೆ, ಹೃತ್ಪೂರ್ವಕ ವಂದನೆಗಳು.

ಆಜೀವ ಸದಸ್ಯರಾಗಲು ಮುಂದೆ ಬಂದಿರುವ ಮಹನೀಯರಿಗೆ ಅಭಿವಂದನೆಗಳು.

ಇಷ್ಟೇ ಈ ಸಾರಿ-

ಎಂದು,
ವಂದನೆಗಳೊಂದಿಗೆ
**ಕುಳುಕುಂದ ಶಿವರಾಯ [ನಿರಂಜನ]**

**ಪುರೋಗಾಮಿ ಪ್ರಕಾಶನ**
**೧೬, ೩ನೆ ರಸ್ತೆ**
**ಚಾಮರಾಜಪೇಟೆ**
**ಬೆಂಗಳೂರು-೨**

# ಪರಿಚಯ

"ನಮ್ಮ ನಡುವಿನ ಗೋಡೆ"ಯಲ್ಲಿ ಆರು ಸಣ್ಣ ಕತೆಗಳಿವೆ. ಕನ್ನಡದ ಮೂವರು ಪ್ರಮುಖ ಲೇಖಕರು ಅವುಗಳನ್ನು ಬರೆದಿದ್ದಾರೆ.

೧೯೪೭ರ ಮೇ ತಿಂಗಳಲ್ಲಿ 'ಜನಶಕ್ತಿ' ಎಂಬ ಕನ್ನಡ ವಾರಪತ್ರಿಕೆ ಹುಬ್ಬಳ್ಳಿಯಲ್ಲಿ ಆರಂಭವಾಯಿತು. 'ನಿರಂಜನ'ರು ಅದರ ಸಂಪಾದಕರಾಗಿ ದ್ದರು. ಒಂದು ವರ್ಷದ ಹಿಂದೆ ಅಕಾಲನಿಧನಕ್ಕೆ ಗುರಿಯಾದ ಶಿವೇಶ್ವರ ದೊಡ್ಡಮನಿಯವರು ಅದರ ಉಪ ಸಂಪಾದಕರೂ ಪ್ರಕಾಶಕರೂ ಆಗಿದ್ದರು. ಆರಂಭದ ಐದು ಕತೆಗಳೆಲ್ಲ ೧೯೪೭ರಲ್ಲೆ 'ಜನಶಕ್ತಿ' ಪತ್ರಿಕೆಯಲ್ಲಿ ಪ್ರಕಟ ವಾದುವು. ಆರನೆಯ ಕತೆಯಾದ "ನಂಬರ್ ೨೦೮ ಮತ್ತು ನೀಲಿ ಬುಶ್ ಕೋಟು" ಎಂಬ ಕತೆ ಮಾತ್ರ ಈ ವರ್ಷದ್ದು. ಜೂನ್ ತಿಂಗಳ 'ಕತೆಗಾರ' ದಲ್ಲಿ ಅದು ಅಚ್ಚಾಯಿತು.

'ಜನಶಕ್ತಿ'ಯು ಶ್ರಮಜೀವಿ ವರ್ಗದ ರಾಜಕೀಯ ಸಾಪ್ತಾಹಿಕವಾಗಿತ್ತು. ಆದರೂ ಸಾಂಸ್ಕೃತಿಕ-ಸಾಹಿತ್ಯಿಕ ಚಳುವಳಿಯಲ್ಲಿ ಅದು ವಹಿಸಿದ ಪಾತ್ರವನ್ನು ಮೂಲೆಗೊತ್ತುವ ಹಾಗಿಲ್ಲ. 'ಶ್ರೀರಂಗ', ಗೋಕಾಕ, 'ಹೇಮಂತ', ವಿ. ಜಿ. ಭಟ್, ಗಂಗಪ್ಪ ವಾಲಿ—ಮತ್ತಿತರರ ಕೃತಿಗಳ ಬಗ್ಗೆ 'ನಿರಂಜನ'ರು ಬರೆಯು ತಿದ್ದ ವಿಮರ್ಶೆಗಳಿಂದ, ಸಾಹಿತ್ಯಿಕ ವಾದ-ವಿವಾದಗಳ ಬಗ್ಗೆ ಪ್ರಕಟವಾಗುತಿದ್ದ ಲೇಖನಗಳಿಂದ, ಏಕೀಕರಣ ಚಳುವಳಿಗೆ ಸಂಬಂಧಿಸಿ ಬರೆಯಲಾಗುತಿದ್ದ ಬರಹಗಳಿಂದ 'ಜನಶಕ್ತಿ' ತುಂಬಿ ಬರುತಿತ್ತು. ಆಗ ಅದರಲ್ಲಿ ಪ್ರಕಟವಾದ ಈ ಸಣ್ಣ ಕತೆಗಳನ್ನು ಅಲ್ಲಿಗೇ ಮರೆಯುವುದುಂಟೆ ? ಅವು ಸಂಗ್ರಹಯೋಗ್ಯ ವೆಂಬ ತಿಳಿವಳಿಕೆಯಿಂದಲೇ ಅವುಗಳನ್ನು ಕಲೆಹಾಕಿದ್ದೇವೆ.

'ಜನಶಕ್ತಿ'ಯೇನೋ ಸರಕಾರದ ಕೃಪಾಕಟಾಕ್ಷಕ್ಕೆ ಗುರಿಯಾಗಿ ನಿಂತುಹೋಯಿತು. ಅದರ ಸಂಪಾದಕ ಮಂಡಲದವರು ಕಷ್ಟ ಅನು ಭವಿಸಿದರು.

ವರ್ಷಗಳು ಕಳೆದುವು. ಸಂಪಾದಕ ಮಂಡಲದ ಶಿವೇಶ್ವರರು ಕಾಲ ವಾದರು.

ಅವರ ನೆನಪನ್ನು ಕನ್ನಡ ಜನ ಮರೆಯುವುದುಂಟೆ ?

ಹಾಗೆಂದೇ ಪ್ರಕಾಶನವು ಈ ಪ್ರಕಟಣೆಯನ್ನು ಅಳಿದ ಆ ಸೋದರನ ನೆನಪಿಗೆ ಕಾಣಿಕೆಯಾಗಿ ಅರ್ಪಿಸಿದೆ.

ಶಿವೇಶ್ವರರು ಮುಖ್ಯತಃ ಕವಿಗಳಾಗಿದ್ದರು. ಗದ್ಯ ಲೇಖನಗಳೂ ಕೆಲ ವನ್ನು ಬರೆದಿದ್ದಾರೆ. ಕತೆ ಎನ್ನುವಂಥಾದ್ದು ಒಂದೋ ಎರಡೋ ಮಾತ್ರ. 'ಜನಶಕ್ತಿ'ಯಲ್ಲಿ ಪ್ರಕಟವಾದ "ನಮ್ಮ ನಡುವಿನ ಗೋಡೆ"ಯನ್ನು ಅವರು ಬರೆದರು. ಆ ಕತೆಯು ಅವರ ಸ್ವಂತ ಕೃತಿಯಲ್ಲ. ಅದರ ಮೂಲ ಲೇಖಕರು, ಕಲ್ಕತ್ತೆಯ ಕಾರ್ಮಿಕ-ಸಾಹಿತಿಯಾದ ಧನಂಜಯ ಘೋಷ್ ಎಂಬವರು. ಬಂಗಾಳಿ "ಸ್ವಾಧೀನತಾ" ಪತ್ರಿಕೆಯಲ್ಲಿ ಅದು ಮೊದಲು ಪ್ರಕಟವಾದಾಗ ತುಂಬ ಆದರಣೀಯವಾಯಿತು. ಕನ್ನಡದಲ್ಲಿ ಶಿವೇಶ್ವರರು ನೀಡಿರುವುದು ಆ ಕತೆಯ ಭಾವಾನುವಾದ. ವರ್ಗಸಮರದ ಹಿನ್ನೆಲೆಯಲ್ಲಿ ಬರೆದ ಈ ಕಥೆ ಬಂಗಾಳಕ್ಕಷ್ಟೇ ಅಲ್ಲ, ಪ್ರತಿಯೊಂದು ನಾಡಿಗೂ ಅನ್ವಯಿಸುವುದು.

ನಮ್ಮ ರೈತರ ಜೀವನವಾದ "ಮಣ್ಣಿನ ಮಕ್ಕಳು" ಕತೆಯನ್ನು ಬರೆದವರು ಚೆನ್ನವೀರ ಕಣವಿಯವರು. ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಇವರು ಈ ವರ್ಷ ಎಂ.ಎ. ವ್ಯಾಸಂಗವನ್ನು ಮುಗಿಸುತಿದ್ದಾರೆ. ಯೌವನದ ಹೊಸ್ತಿಲಲ್ಲಿ ನಿಂತು ಕಣವಿ, ಸಮಾಜದ ಭವ್ಯದರ್ಶನವನ್ನು ನಿರೀಕ್ಷಿಸುತಿದ್ದಾರೆ. ಅವರು ಕೂಡಾ ಮುಖ್ಯತಃ ಕವಿ. ಅವರ ಕಾವ್ಯ-ಕೃತಿಗಳೆರಡು ಆಗಲೇ ಅಚ್ಚಾಗಿವೆ. ಅವರೆ ಗದ್ಯ ಕೃತಿಯನ್ನು ಅವರು ಬರೆದರೆ, ಅದೆಷ್ಟು ಸುಂದರವೂ ಕಾವ್ಯಮಯವೂ ಆಗುವುದೆಂಬುದಕ್ಕೆ "ಮಣ್ಣಿನ ಮಕ್ಕಳು" ಸಾಕ್ಷಿ. ಅವರು ಶಿವೇಶ್ವರರ ಆಪ್ತಮಿತ್ರರಾಗಿದ್ದರು. ಎಂತಲೇ ಈ ಸಂಗ್ರಹದಲ್ಲಿ ಅವರ ಕತೆ ಬಂದಿರುವುದು ಯೋಗ್ಯವಾಗಿದೆ.

'ನಿರಂಜನ'ರು ಉಳಿದ ನಾಲ್ಕು ಕತೆಗಳ ಕತೆಗಾರರು. ೧೯೪೦-೫೦ರ ಕಾಲಾವಧಿಯಲ್ಲಿ ಅವರು ಬರೆದ ಕಥೆಗಳು ಹೊಸ ನೋಟವನ್ನು ಹೊಸ ಮಾರ್ಗವನ್ನು ತೋರಿವೆ. ಅವರು ಸತ್ಯದ ಪ್ರಚಾರಕ್ಕಾಗಿಯೇ ಲೇಖನಿಯನ್ನು ಮೀಸಲಿಟ್ಟವರು. ವಾಸ್ತವಿಕ ಸ್ಥಿತಿಗತಿಗಳಿಂದ ವಸ್ತುವನ್ನಾಯ್ದು,

ಕಲ್ಪನೆಯ ದೃಷ್ಟಿಯಿಂದ ಅದನ್ನು ನೋಡಿ, ಕಲಾತ್ಮಕವಾಗಿ ಅವರು ಬರೆಯುತ್ತಾರೆ.

ಈ ಸಂಗ್ರಹದಲ್ಲಿರುವ "ಇಬ್ಬರು ಗುಂಡರು", ಕಾರವಾರದ ರೈತ ಚಳುವಳಿಯ ಹಿನ್ನೆಲೆಯಲ್ಲಿ ಬರೆದುದು. ಅದರಲ್ಲಿ ಕಾಣಬರುವ ವ್ಯಕ್ತಿಗಳನ್ನು ಅವರು ಬಲ್ಲರು.

"ಹೊಸ ಕೂಸು", ರೈಲ್ವೆ ಕಾರ್ಮಿಕರೊಡನೆ ಹುಬ್ಬಳ್ಳಿಯಲ್ಲಿ ಅವರಿಗಿದ್ದ ಸಮೀಪ ಸಂಬಂಧದ ಫಲವಾಗಿ ಹುಟ್ಟಿತು.

"ಸೈತಾನನ ಸ್ಮಶಾನ ಯಾತ್ರೆ"ಗೊಂದು ವಿಶಿಷ್ಟ ಸ್ಥಾನವಿದೆ ಎಂದು ನಮ್ಮ ಅಭಿಪ್ರಾಯ.

೧೯೪೭ರ ಉತ್ತರಾರ್ಧದಲ್ಲಿ ಮೈಸೂರು ಸಂಸ್ಥಾನದಲ್ಲಿ ಪಾಳೆಯಗಾರ ಪದ್ಧತಿಯ ವಿರುದ್ಧ ನಡೆದ ಮಹಾ ಚಳುವಳಿಯ ನೆನಪು ನಮ್ಮ ಜನರಲ್ಲಿನ್ನೂ ಅಚ್ಚಳಿಯದೆ ಉಳಿದಿದೆ. ಜನತೆಯ ಆ ಜೀವನ-ಮರಣ ಹೋರಾಟ ನಡೆದಿದ್ದಾಗ, ನಮ್ಮ ಸಾಹಿತ್ಯಿಕ-ಸಾಂಸ್ಕೃತಿಕ ಅಧ್ವರ್ಯುಗಳು ವಹಿಸಿದ ಪಾತ್ರವೇನೆಂಬುದು, ಆ ಹೋರಾಟದ ಬಗ್ಗೆ ಹೇರಳ ಕೃತಿಗಳೇಕೆ ಬರಲಿಲ್ಲವೆಂಬುದು, ದೊಡ್ಡ ಸಮಸ್ಯೆಯೇ ಆಗಿದೆ.

ಮೈಸೂರಿನ ಜನತೆಯ ಹೋರಾಟದ ಕಾಲದಲ್ಲಿ 'ಜನಶಕ್ತಿ' ಪತ್ರಿಕೆ, ಚಳುವಳಿಗೆ ಎಷ್ಟೋ ಸೇವೆ ಸಲ್ಲಿಸಿತು. ಸಂಸ್ಥಾನದೊಳಕ್ಕೆ ಆ ಪತ್ರಿಕೆ ಆಗ ಬರದಂತೆ ಪಾಳೆಯಗಾರ ಪ್ರಭುತ್ವ ತಡೆಹಿಡಿಯಿತು. ಹೀಗಿದ್ದರೂ ಸಂಸ್ಥಾನದ ಪ್ರಮುಖ ಸ್ಥಳಗಳಿಗೆ—ಹೋರಾಟದ ಕ್ಷೇತ್ರಗಳಿಗೆ—ಪತ್ರಿಕೆ ಹೋಗದಿರಲಿಲ್ಲ.

ಹೋರಾಟದ ಮೂರನೆಯ ವಾರದಲ್ಲೇ ಅಚ್ಚಾದ ಕತೆ "ಸೈತಾನನ ಸ್ಮಶಾನ ಯಾತ್ರೆ". ಚಳುವಳಿ ಹೆಚ್ಚು ಹೆಚ್ಚು ಭೀಷಣವಾಗುತ್ತಿದ್ದಾಗಲೇ ಅದು 'ಜನಶಕ್ತಿ'ಯಲ್ಲಿ ಪ್ರಕಟವಾಯಿತು.

ಈ ವರ್ಷದ ಒಂದು ಕತೆಯಾದ "ನಂಬರ್ ೨೦೮ ಮತ್ತು ನೀಲಿ ಬುಶ್ ಕೋಟು", ಹೆಚ್ಚು ಹೆಚ್ಚು ದರಿದ್ರವಾಗುತ್ತ ನಡೆದಿರುವ ಬಡ ಮಧ್ಯಮ ವರ್ಗೀಯ ಕುಟುಂಬವೊಂದರ ಹೊಯ್ದಾಟಗಳನ್ನು ಚಿತ್ರಿಸಿದೆ; ದೇಶದ ಪಾಳೆಯಗಾರ ಚೌಕಟ್ಟಿನೊಳಗೆ, ನಮ್ಮ ರಾಷ್ಟ್ರೀಯ ಬಂಡವಾಳಗಾರರೂ

ಹೇಗೆ ತೊಳಲಾಡುತ್ತಿರುವರೆಂಬುದರ ಒಂದು ದೃಶ್ಯ ಅದರಲ್ಲಿದೆ. ಬೆಂಗಳೂರಿನ ಹಿನ್ನೆಲೆಯಲ್ಲಿ ಈ ಕತೆ ಕಲಾತ್ಮಕವಾಗಿ ರೂಪುಗೊಂಡಿದೆ.

ಇವಿಷ್ಟು ಕತೆಗಳ ಕತೆಗಾರರ ಪರಿಚಯ.

ನಮ್ಮ ನಾಡಿನ ಸಾಹಿತ್ಯ ಸೃಷ್ಟಿಯಲ್ಲಿ ಈ ಎಲ್ಲ ಕತೆಗಳ ಸ್ಥಾನವೇನೆಂಬುದನ್ನು ನಿರ್ಧರಿಸಬೇಕಾದವರು ಓದುಗರು. ಅವರ ಕೈಗೆ ಪುಸ್ತಕವನ್ನೊಪ್ಪಿಸಿದ ಮೇಲೆ, ಹೆಗಲ ಮೇಲಿನ ದೊಡ್ಡ ಹೊರೆಯನ್ನು ಇಳಿಸಿದ ಹಾಗಲ್ಲವೆ ?

೧ ಜೂಲೈ ೧೯೫೧
ಮುಂಬಯಿ

**ವಾಸುದೇವ**

# ಸೋದರ ಶಿವೇಶ್ವರರ ನೆನಪಿಗೆ

ಶಿವೇಶ್ವರ ತೀರಿಕೊಂಡು ಒಂದು ವರ್ಷದ ಮೇಲಾಯಿತು. ಇಷ್ಟು ಅವಧಿಯ ಅನಂತರವೂ ಶಿವೇಶ್ವರನ ಬಗ್ಗೆ ಬರೆಯಬೇಕೆಂದರೆ ನನ್ನ ಹೃದಯ, ಸಂವೇದನೆಯಿಂದ ಹೊಯ್ದಾಡುವುದು. ಮನ ತಳಮಳಿಸುವುದು. ಕೈ ತತ್ತರಿಸುವುದು.

ಆತ ನನ್ನ ಆತ್ಮೀಯನಾಗಿದ್ದ; ಆತನ ಭವಿತವ್ಯದ ಬಗ್ಗೆ ನಾನು ಏನೇನೋ ಕನಸು ಕಂಡಿದ್ದೆ.

ಸಾವಿನ ಕರಿಯ ಪರದೆ ಇಪ್ಪತ್ತೈವರ ಯೌವನದಲ್ಲೇ ಆತನನ್ನು ಮುಸುಕಿ ಹಿಸುಕುವುದೆಂದು ನಾನು ತಿಳಿದಿರಲಿಲ್ಲ.

ಶಿವೇಶ್ವರ ದೊಡ್ಡಮನಿ ಕಾಲವಾದಾಗ ನಾನು ಬೆಂಗಳೂರಲ್ಲಿದ್ದೆ. ಆತ ತೀರಿಕೊಂಡು ಒಂದು ತಿಂಗಳಾದ ಮೇಲೆ, ಬರಸಿಡಿಲಿನಂಥ ಆ ವಾರ್ತೆ ನನಗೆ ತಲಪಿತು.

ಆಪ್ತನೊಬ್ಬನನ್ನು, ಸಹಬಾಂಧವನೊಬ್ಬನನ್ನು ಕಳೆದುಕೊಂಡು ನಾನು ಬಡವಾದೆ. ಮತ್ತೆ ಹಲವು ತಿಂಗಳ ಬಳಿಕ, ಭಾರವಾದ ಹೃದಯ ಹೊತ್ತು, ಬಾಡಿದ ಮುಖವೆತ್ತಿಕೊಂಡು, ಧಾರವಾಡದ ಸಮೀಪವಿರುವ ಅವರ ಹಳ್ಳಿಯಾದ ನವಿಲೂರಿಗೆ ಹೋಗಿ ಬಂದೆ. ಅವರು ಬಿಟ್ಟುಹೋಗಿದ್ದ ತಾಯಿಗೆ, ಮಡದಿಗೆ ಗೌರವದಿಂದ ತಲೆಬಾಗಿ ಬಂದೆ. ಅವರ ಮೂವರು ಎಳೆಯ ಮಕ್ಕಳನ್ನು—ಕಾಮಾಕ್ಷಿ [ಬಸಮ್ಮ], ರವಿ, ಪೂರ್ಣಿಮಾರನ್ನು—ಕಂಡು ಬಂದೆ.

ಮಗನನ್ನು ಕಳೆದುಕೊಂಡಿದ್ದ ಆ ತಾಯಿ ದೂರದಿಂದ ಬಂದಿದ್ದ:ನನಗೆ ಉಣಬಡಿಸಿದರು; ಆ ತುತ್ತು ನನ್ನ ಗಂಟಲಿನ ಕೆಳಕ್ಕಿಳಿಯಲಿಲ್ಲ.

....ಕಳೆದ ಜೂನ್ ತಿಂಗಳ ಕೊನೆಯಲ್ಲಿ ನಾನು ಹುಬ್ಬಳ್ಳಿಗೆ ಹೋಗಿದ್ದೆ. ಮೂರು ವರ್ಷಗಳ ಅಂತರದ ಬಳಿಕ ಒಂದು ಒಳ್ಳೆಯ ಪ್ರಾತಃಕಾಲ ಆ

ನಗರದ ಬೀದಿಗಳಲ್ಲಿ ನಾನು ಓಡಾಡಿದೆ. ೧೯೪೬-೪೭; ಆಗಿನ ಸಾವಿರ ನೆನಪು....ನಮ್ಮೆಲ್ಲರ ಚಟುವಟಿಕೆ...."ಜನಶಕ್ತಿ" ಪತ್ರಿಕೆ....

ಒಂದು ಪಕ್ಕದಿಂದ ಇನ್ನೊಂದು ಪಕ್ಕಕ್ಕೆ ತಿರುಗಿದಾಗ, ಒಂದು ಬೀದಿಯನ್ನು ಹಾದು ಇನ್ನೊಂದಕ್ಕೆ ಬಂದಾಗ, ದೂರದಿಂದ ಪಾಯಜಾಮು ಶರಟು ಕೋಟುಗಳ ಯಾವುದಾದರೂ ಎಳೆಯ ತೆಳ್ಳನೆಯ ಕರಿಯ ದೇಹವೊಂದು ಕಂಡು ಬಂದರೆ, ನನ್ನೆದೆ ಮಿಡಿಯುತಿತ್ತು.

ಆ ರೂಪದಲ್ಲೇ ೧೯೪೬ರಲ್ಲಿ ನಾನು ಶಿವೇಶ್ವರರನ್ನು ಮೊದಲು ಕಂಡುದು. ಆ ರೀತಿಯಲ್ಲೇ ನಾವು ಆಪ್ತರಾದುದು.

ನನ್ನ ಸ್ಮೃತಿಪಟಲದ ಮೇಲೆ ಸ್ಥಿರವಾಗಿ ಮುದ್ರೆಯೊತ್ತಿರುವುದು ಅದೇ ನೆನಪು.

## ಒಂದು ಜೀವ ಹುಟ್ಟಿ ಬೆಳೆಯಿತು

೭-೫-೧೯೨೫. ಆಗ ಒಂದು ಜೀವ ಹುಟ್ಟಿತು. ಅದೇ ಶಿವೇಶ್ವರ ದೊಡ್ಡಮನಿ. ಆರು ತಿಂಗಳ ಕೂಸಾಗಿದ್ದಾಗಲೇ ಅವರ ತಂದೆ ಕಾಲವಾದರು. ಬಾಳ್ವೆಯ ಅಳಲನ್ನೆಲ್ಲ ನುಂಗಿಕೊಂಡ ತಾಯಿ, ಶಿವೇಶ್ವರನನ್ನು ಸಾಕಿ ದೊಡ್ಡವನನ್ನಾಗಿ ಮಾಡಿದರು. ಶಿವೇಶ್ವರ ಒಬ್ಬನೇ—ಅಣ್ಣನಿಲ್ಲ ತಮ್ಮನಿಲ್ಲ; ಅಕ್ಕನಿಲ್ಲ ತಂಗಿಯಿಲ್ಲ, ಆತ ಒಬ್ಬನೇ. ಬಲು ಮಮತೆಯಿಂದ ಆ ತಾಯಿ ಮಗುವನ್ನು ಸಾಕಿದರು.

ಹಿಂದೆ ಅವರದು ಶ್ರೀಮಂತ ನೇಕಾರರ ಕುಟುಂಬವಾಗಿತ್ತು. ಕಾಲಕ್ರಮೇಣ ದರಿದ್ರಾವಸ್ಥೆಗೆ ಇಳಿದುಹೋದ ಗುಡಿ ಕೈಗಾರಿಕೆ ಅದು. ಆ ತಾಯಿ, ಉಳಿದೊಂದು ಮಗ್ಗದ ಮೇಲೆ ಕೈಯಾಡಿಸುವುದರ ಜೊತೆಗೆ, ಒಂದು ಚೂರು ಹೊಲದಲ್ಲೂ ಸಾಗುವಳಿ ಮಾಡಿ, ಮಗನ ಪೋಷಣೆಯ ಭಾರ ಹೊತ್ತರು. ಹತ್ತಿರದ ಧಾರವಾಡದಲ್ಲಿ ವಿದ್ಯೆ ಕಲಿಸಿದರು. ಮನೆಗೊಂದು ಸೊಸೆಯನ್ನು ತಂದರು.

ಮ್ಯಾಟ್ರಿಕ್ ಮುಗಿಸಿದ ಶಿವೇಶ್ವರ, ಹೆಚ್ಚು ಖರ್ಚಿನ ಕಾಲೇಜ್ ಶಿಕ್ಷಣವನ್ನು ದೊರಕಿಸಿಕೊಳ್ಳಲಿಲ್ಲ.

ಕಹಿಯನ್ನೆಲ್ಲ ನುಂಗಿ ತಾಯಿ ಹಾಡುತಿದ್ದ ಗೀತಗಳ, ನೋವನ್ನೆಲ್ಲ ಮರೆತು ಹಳ್ಳಿಯ ಮೂಕ ಜೀವಿಗಳಾಡುತಿದ್ದ ಮೌನ ಮಾತುಗಳ, ಆ ಸರಳ

ತೆಯ ಮುಗ್ಧತೆಯ—ವಾತಾವರಣದಲ್ಲಿ ಶಿವೇಶ್ವರ ಸಂವೇದನಾ ಜೀವಿಯಾಗಿ ಸೂಕ್ಷ್ಮಗ್ರಾಹಿಯಾಗಿ ಬೆಳೆದರು. ಕನ್ನಡದ ಪುನರುದ್ದೀಪನ ಚಳುವಳಿ ಬಲಗೊಳ್ಳುತ್ತಿದ್ದ ಧಾರವಾಡ ಅವರ ಜೀವದ ಆಕಾಂಕ್ಷೆಗಳಿಗೆ ಪುಟಕೊಟ್ಟಿತು. ಹೈಸ್ಕೂಲಲ್ಲಿದ್ದಾಗಲೇ ಸಾಹಿತ್ಯದ ಕಡೆಗೆ ಅವರ ಒಲವು ಹರಿಯಿತು.

ಯಾವುದೋ ಹಾಡಿದ ಧ್ವನಿ ಕೇಳಿದಾಗ ಅವರದನ್ನು ಹಿಂಬಾಲಿಸಿದರು. ಯಾರದೋ ಕಾವ್ಯ ಹರಿದು ಬಂದಾಗ ಆ ತೊರೆಯಲ್ಲಿ ಕಾಲು ಚಾಚಿ ಅವರು ಲಲ್ಲೆಯಾಡಿದರು.

ಜನಪದವು ಹಾಡುತಿದ್ದ ತಾನು ಕೇಳುತಿದ್ದ ಗೀತಗಳನ್ನೆಲ್ಲ ಅವರು ಒಡಮೂಡಿಸಿಕೊಂಡರು. ಜತೆಯಲ್ಲೇ ತಾವು ಅನುಭವಿಸಿದ್ದನ್ನು ತಮ್ಮ ಪ್ರತಿಕ್ರಿಯೆಯನ್ನು ಅವರು ಪ್ರತಿಮೂಡಿಸಿದರು. ಹೀಗೆ ಶಿವೇಶ್ವರ ಕವಿಯಾದರು.

ಕಾವ್ಯ ಭಾಷೆ ಸಾಲದೆನಿಸಿದಾಗ, ಅವರು ಗದ್ಯರೂಪದಲ್ಲೂ ಬರೆಯ ತೊಡಗಿದರು.

### ನೌಕರಿ-ಉದ್ಯೋಗ

ನವಲೂರನ್ನು ನವಿಲೂರು ಎಂದು ಪುನಃ ನಾಮಕರಣ ಮಾಡಲು ಎದೆಗಾರಿಕೆ ತೋರಿದ ಈ ಕವಿ, ನೌಕರಿಯ ಬೆನ್ನು ಹತ್ತಬೇಕಾಯಿತು. ಈ ಸಮಾಜ ಪದ್ಧತಿಯಲ್ಲಿ ತನಗೆ ಪ್ರಿಯವಾದುದನ್ನೆ ಮಾಡುತ್ತ ದಿನಕಳೆಯುವ ಹಕ್ಕು ಅವರಿಗಿರಲಿಲ್ಲ. ಅವರು ದುಡಿದು ಸಂಪಾದಿಸ ಬೇಕಾಗಿತ್ತು.

ಮೊದಲಿನಿಂದಲೂ ಕ್ಷೀಣ ಪ್ರಕೃತಿಯವರಾದ ಶಿವೇಶ್ವರರನ್ನು ಅನಾರೋಗ್ಯ ಆಗಾಗ್ಗೆ ಕಾಡಿಸುತಿತ್ತು. ಕಣ್ಣು ಬೇನೆಯೊಂದು ಎಂದಿಗೂ ಬಿಡಲಾರದ ಹಾಗೆ ಅವರನ್ನು ಅಂಟಿಕೊಂಡಿತು. ದೃಷ್ಟಿ ದೋಷವೊಂದು ಸದಾಕಾಲ ಪೀಡಿಸಲೆಂದೇ ಅವರಲ್ಲಿ ಮನೆಮಾಡಿತು.

ಆರು ತಿಂಗಳ ಕಾಲ ಧಾರವಾಡದ ರೇಶನಿಂಗ್ ಆಫೀಸಿನಲ್ಲಿ ಕಾರಕೂನಿಕೆ; ಆ ಬಳಿಕ ಧಾರವಾಡದ ಮುನಿಸಿಪಲ್ ಸ್ಕೂಲ್ ಬೋರ್ಡಿನಲ್ಲಿ ಕ್ಲಾರ್ಕ್; ಮತ್ತೆ ಒಂದು ವರ್ಷ ಹುಬ್ಬಳ್ಳಿಯ ಆಂಗ್ಲೋ-ಉರ್ದು ಸ್ಕೂಲಿನಲ್ಲಿ ಗುಮಾಸ್ತಗಿರಿ....ಹೀಗೆ ಆ ಜೀವ ದುಡಿಯಿತು.

## ರೂಪುಗೊಳ್ಳುತ್ತಲಿದ್ದ ಬಾಳು

ಸುತ್ತಲಿನ ವಾತಾವರಣದ ಬಗ್ಗೆ ದೊಡ್ಡಮನಿ ಪ್ರತಿಕ್ರಿಯೆ ವ್ಯಕ್ತಪಡಿಸ ತೊಡಗಿದಾಗ, ವಾತಾವರಣ ಅವರ ಮೇಲೆ ಪ್ರಭಾವ ಬೀರತೊಡಗಿದಾಗ, ಅವರ ಕಾವ್ಯಶಕ್ತಿ ಬಲಿಯಿತು.

ನೊಂದ ಜೀವಗಳಿಗಾಗಿ ಅವರು ಪರಿತಪಿಸಿದರು. ಅನ್ಯಾಯವನ್ನು ಕಂಡಾಗ ಅವರ ಮನಸ್ಸು ರೋಸತೊಡಗಿತು. ದುಷ್ಟ ಶಕ್ತಿಗಳನ್ನು ಅವರು ಮನಸಾರೆ ದ್ವೇಷಿಸಿದರು. ಕಂಬನಿ ಮಿಡಿಯುವ ಕಣ್ಣನ್ನು ತನ್ನ ಕಣ್ಣ ಹನಿಯಿಂದ ಅವರು ತೋಯಿಸಿದರು. ಬಡವರನ್ನು ಮನಮುಟ್ಟಿ ಅವರು ಪ್ರೀತಿಸಿದರು.

ನೋವು ಸಂಕಷ್ಟವನ್ನು ಅವರು ಎಂದೂ ಅಪೇಕ್ಷಿಸಿದ್ದಿಲ್ಲ. ಅಸ್ಪಷ್ಟವಾಗಿ ಹೊಸ ಸಮಾಜದ ಹೊಸ ಬಾಳಿನ ಕಲ್ಪನೆ ಅವರಲ್ಲಿ ಮೂಡಿತ್ತು.

ಅತಿ ಕ್ರೂರವಾಗಿ ಅವರ ಲೇಖನಿ ಇರಿಯುವುದನ್ನು ಕಲಿಯಿತು. ಈ ಸಮಾಜದಲ್ಲಿ ಬುದ್ಧಿಮತ್ತೆಯನ್ನೂ ಸಂಸ್ಕೃತಿಯನ್ನೂ ತಮ್ಮ ಸೊತ್ತಾಗಿ ಮಾಡಿಕೊಂಡ ಶೋಷಕರ ಮೇಲೆ ಅವರು ಕೆರಳಿಬಿದ್ದರು.

"ಧಿಕ್ಕಾರ!" ಎಂಬ ಅವರ ಕವಿತೆ ಹೀಗೆ ಹರಿಯಿತು:

ಹಸಿಯ ಗಾತ್ರದ ನಿಮ್ಮ ಗುಣಕೆ ಹೆಗ್ಗಡಲೆಂದು
ಸನ್ಮಾನಿಸಲಿ ಜನರೆನುವ ಬುದ್ಧಿ ಜೀವಿಗಳೆ,
ಒಳಗಣ್ಣ ಎವೆ ಮುಚ್ಚಿ ಹುಲುನುಡಿಯ ಬಗೆ ಕೊಚ್ಚಿ
ಮೆದುಳು ಮಂಕಾಗುವೊಲು ಹುಚ್ಚು ದುಡಿತಕೆ ಹಚ್ಚಿ
ನಿಮ್ಮ ನೀವರಿಯದೆಯೆ ನಾಡುನುಡಿಗಳ ಕಹಳೆ-
ಯೂದಿದರೆ ಯಾವ ಫಲ ? ಜಡಿಮಳೆಯು ಹೊಡೆವಂದು
ಜಂಪಲಿಕ್ಕಿದ ಮನೆಯ ತೆರ ನಿಮ್ಮ ಮನ ; ಕಂಡಿಹಿರ ?
ಸ ಸ್ಕೃತಿಯ ಪ್ರತಿಬಿಂಬವೇ ನೀವು ?—ಧಿಕ್ಕಾರ !
ಒಲವನಣಕಿಸಿ ಒಡಲ ಕರುಳ ಕೆಣಕಿಸಿದವರೆ
ಒಲವು ನನ್ನಿಗೆ ಉನ್ನತಾರ್ಥ ನೀತಿಯ ಪಹರೆ,
ನಶ್ವರತೆಗೆಡೆಯಲ್ಲವಿದು ಮಹೇಶ್ವರ ಸದೃಶ ;
ತಾಯ ಎದೆ ಸಂದೇಶ; ಲೇಖನಿಯ ಉದ್ಘೋಷ-
ಕೆರಡು ಬಗೆದತೆ ನಿಮ್ಮ ಜೀವಕೆಲ್ಲಿಯ ಚಿಂತೆ ?
ಪುಣ್ಯಭೂಮಿಗೆ ಕುಂದು ಮಣ್ಣುಪಾಲೀ ಘನತೆ.

ಇದೊಂದು ರೀತಿಯಾದರೆ ಇಲ್ಲಿದೆ ಇನ್ನೊಂದು ರೀತಿ : ತಂಗಿಗೆ ಎಂದು ಬರೆದ ಸುನೀತವೊಂದರ ಕೊನೆಯ ಆರು ಸಾಲುಗಳು:

**ಹೋಗಿ ಬಾ, ಎದೆಗುಡಿಯ ಮುಂದೆ ದೀಪಸ್ತಂಭ**
**ಕಟ್ಟುವೆವು ನಮ್ಮೊಲುಮೆ ತಿರೆ ಎಂದು ನಶಿಸದಂತೆ**
**ನೀ ಬಂದು ಅಣ್ಣಾ ಎಂದು ಸೊಡರನಿಡು, ಅಂಬ-**
**ರಾಧಿಪತಿ ಹಿಗ್ಗಿ ನಮ್ಮೊಡನಾಡ ಬರುವನಂತೆ;**
**ಹೋಗಬಹುದೇ ಇನ್ನು, ಹೃದಯಕವನದ ಕಂತು**
**ಕೊಳ್ಳಿದನು, ಚಣಕೊಮ್ಮೆ ಹಾಡುವೆವು ಶುಭಮಸ್ತು !**

—ಕುಸುಮಕೋಮಲ ಭಾವನೆಯೊಂದು ವೈಯಕ್ತಿಕ ಜೀವಿಗಾಗಿ, ತನ್ನ ಬಾಳನ್ನು ಸ್ವಪ್ನಮಯಗೊಳಿಸಿದ ಅಲಂಕರಿಸಿದ ಯಾವುದೋ ಮನೆಯ ಸೋದರಿಯೊಬ್ಬಳಿಗಾಗಿ, ಇಲ್ಲಿ ಅರಳಿದೆ.

ಗದ್ಯದಲ್ಲೂ ಹಾಗೆಯೇ. ಬೇಕಾದಾಗ ಗಡಸುತನ, ಬೇಕಾದಾಗ ಸೂಕ್ಷ್ಮ ನಗೆ-ವ್ಯಂಗ್ಯ, ಮತ್ತೆ ಬೇಕಾದಾಗ ಅತಿ ಮಧುರ ಭಾವನೆಯ ಕಲಕಲನಾದ....

**ಜನತೆಯ ಚಳುವಳಿಯೊಡನೆ**

ರೂಪುಗೊಳ್ಳುತ್ತಲಿದ್ದ ಅವರ ಬಾಳು ೪೬-೪೭ರ ಅಂತರದಲ್ಲಿ ಜನತೆಯ ಚಳುವಳಿಯ ಎಡೆಗೆ ಅವರನ್ನು ತಂದು ಮುಟ್ಟಿಸಿತು.

ವಿವಿಧ ಪತ್ರಿಕೆಗಳಲ್ಲಿ ಪ್ರಕಟವಾಗುತಿದ್ದ ತಮ್ಮ ಜನಪದ ಗೀತಗಳಿಂದ, ಕಾವ್ಯ ಕೃತಿಗಳಿಂದ, ನೂರಾರು ಜನರ ಗಮನವನ್ನು ಸೆಳೆದಿದ್ದ ನವಿಲೂರಿನ ಶಿವೇಶ್ವರ ದೊಡ್ಡಮನಿಯನ್ನು ಕಾಣಲು ನಾನು ಹಂಬಲಿಸುತಿದ್ದೆ. ಆ ಹಂಬಲಕ್ಕೆ ಉತ್ತರವಾಗಿ ಅವರೇ ಒಂದು ದಿನ ಹುಬ್ಬಳ್ಳಿಯ ಮರಾಠಾಗಲ್ಲಿಯ ಒಂದು ಅಟ್ಟದ ಮೇಲಿದ್ದ ನಮ್ಮ ಕಾರ್ಯಾಲಯಕ್ಕೆ ಬಂದರು.

ಅಂದಿನಿಂದ ನಾವು ಜತೆಯಾಗಿ ಕುಡಿದ ಚಹಾ, ಸೇದಿದ ಸಿಗರೇಟು, ಮೌನವಾಗಿಯೇ ಆದರೂ ಜತೆಯಾಗಿಯೇ ಬೀದಿಯುದ್ದಕ್ಕೂ ನಾವು ನಡೆದ ನಡಿಗೆ—ಒಂದೊಂದೂ ನನಗೆ ನೆನಪಿದೆ.

ಉತ್ತರ ಕರ್ನಾಟಕದಲ್ಲಿ ಅದೇ ಹೊಸತಾಗಿ ಆರಂಭವಾಗಿ ಬೆಳೆಯುತ್ತಲಿದ್ದ ರೈತರ ಚಳುವಳಿ, ಕೂಲಿಕಾರರ ಹೋರಾಟಗಳು, ಅವರನ್ನು ಆಕರ್ಷಿಸಿ

ದುವು. ಸೂಕ್ಷ್ಮಗ್ರಾಹಿಯಾದ, ಬಾಳಿನ ಕುಲಿಮೆಯಲ್ಲೇ ಪುಟವಿಟ್ಟು ಬಂದ, ಈ ಬುದ್ಧಿಜೀವಿ, ತಾವು ಯಾರ ಕಡೆ ಎಂಬುದನ್ನು ನಿರ್ಧರಿಸಿದರು.

ಒಂದು ರಾತ್ರಿ ಅವರು ತಮ್ಮ ಹಳ್ಳಿಗೆ ಹೋಗದೆ ಹುಬ್ಬಳ್ಳಿಯಲ್ಲೇ ತಂಗಿದುದು ನೆನಪಾಗುತ್ತಿದೆ. ರಾತ್ರೆ ಹೊತ್ತಾಗಿದ್ದರೂ ಚಿಮಿಣಿ ದೀಪ ಉರಿಸಿಕೊಂಡು ಮಾರ್ಕ್ಸ್-ಎಂಗೆಲ್ಸರ 'ಘೋಷಣೆ'ಯನ್ನು ಅವರು ಓದುತಿದ್ದರು. "ಆ ದೀಪದೆದುರಲ್ಲಿ ಎಂಥ ಓದು; ನೋವಿನ ಕಣ್ಣನ್ನು ಇನ್ನಷ್ಟು ನೋಯಿಸಬೇಡಿ;"—ಎಂದು ನಾನು ಹೇಳಿದೆ.

ಅವರು ಆ ಮಾತನ್ನು ಗಮನಿಸಲೇ ಇಲ್ಲ. ಯಾವುದೋ ಒಂದು ಶಬ್ದ ಅವರಿಗೆ ತೊಡಕನ್ನು ಉಂಟುಮಾಡಿತ್ತು.

"Proletariat ಅಂದರೇನ್ರೀ?" ಎಂದರವರು.

....ಹಾಗೆ ಅಭ್ಯಾಸಮಾಡಲು ಅವರು ಯತ್ನಿಸಿದರು. ತಮ್ಮ ವಿಚಾರಗಳನ್ನು ವಿಜ್ಞಾನದ ಒರೆಗಲ್ಲಿಗೆ ತೀಡಿ ನೋಡುವ, ಜೀವನ ವ್ಯಾಪಾರಗಳ ಬಗ್ಗೆ ತಿಳಿವಳಿಕೆಯನ್ನು ಶಾಸ್ತ್ರೀಯಗೊಳಿಸುವ, ಮಹಾವಕಾಶ ಅವರಿಗೆ ದೊರಕಿತು. ಆದರೆ, ಅಂಧತೆಯ ಕಡೆಗೆ ಧಾವಿಸುತಿದ್ದ ದೃಷ್ಟಿದೋಷ, ಅನಾರೋಗ್ಯ, ಚಿಕಿತ್ಸೆ ಮಾಡಿಸಿಕೊಳ್ಳಲು ಹಣದ ಅಭಾವ, ಜೀವವನ್ನು ಒಳಗಿಂದೊಳಗೇ ಕೊರೆಯುತಿದ್ದ ಗೃಹತಾಪತ್ರಯದ ಅಸಹನೀಯ ವೇದನೆ—ಇವು ಆ ಸೋದರನಿಗೆ ಎದುರು ನಿಂತುವು.

೧೯೪೮ರ ಮೇ ಮೊದಲಲ್ಲಿ "ಜನಶಕ್ತಿ"ಯನ್ನು ಹೊರಡಿಸಿದೆವು. ತಮ್ಮ ಮುಂದಿದ್ದುದು "ಬೆವರು-ಕಣ್ಣೀರು, ನಷ್ಟ-ನೋವು, ಸೆರೆಮನೆ ಕೂಡಾ" ಎಂಬುದು ಗೊತ್ತಿದ್ದೂ ಶಿವೇಶ್ವರರು, ಇದ್ದ ನೌಕರಿಯನ್ನು ಬದಿಗೊತ್ತಿ, ಪತ್ರಿಕೆಯ ಪ್ರಕಾಶಕನಾದರು; ಉಪಸಂಪಾದಕನಾದರು.

**'ಜನಶಕ್ತಿ'ಯ ಉಪಸಂಪಾದಕನಾಗಿ**

ಬೆಳಿಗ್ಗೆ ಬುತ್ತಿಕಟ್ಟಿಕೊಂಡು ನವಿಲೂರಿನಿಂದ ಅವರು ಬರುತಿದ್ದರು. ಬರುತ್ತ ಹಾದಿಯಿಂದ ಹಳದಿ ಹೂವಿನ ಎರಡು ಗೊಂಚಲುಗಳನ್ನು ಕಿತ್ತು ತರುತಿದ್ದರು.

ಕಾರ್ಯಾಲಯದಲ್ಲಿ ಮ್ಯಾಕ್ಸಿಂ ಗಾರ್ಕಿಯ ಎರಡು ದೊಡ್ಡ ಭಾವಚಿತ್ರಗಳಿದ್ದುವು. ಒಂದು ವೃದ್ಧ ಗಾರ್ಕಿ-ಇನ್ನೊಂದು ಬಾಲಕ ಗಾರ್ಕಿ. ಕವಿ

ಶಿವೇಶ್ವರ ಒಂದೊಂದು ಹೂ ಗೊಂಚಲನ್ನು ಒಂದೊಂದು ಭಾವಚಿತ್ರಕ್ಕೆ ಅನಿಸಿ, ಅಲ್ಲಿಂದ ಹೊರಟು ದುರ್ಗದಬೈಲಿನಲ್ಲಿದ್ದ ಮುದ್ರಣಾಲಯಕ್ಕೆ ಬರುತಿದ್ದರು. ಅಲ್ಲಿ ಜತೆಯಾಗಿ ಆ ವಾರದ ಸಂಚಿಕೆಗೋಸ್ಕರ ನಾವು ದುಡಿಯುತಿದ್ದೆವು.

ಆ ವರ್ಷ ನವೆಂಬರ್ ಕ್ರಾಂತಿಗೆ ಸಂಬಂಧಿಸಿ ಇಪ್ಪತ್ತು ಪುಟಗಳ ಒಂದು ವಿಶೇಷಾಂಕ ಹೊರಡಿಸಲು ನಿರ್ಧರಿಸಿದೆವು.

ರಜಾದ ಮೇಲೆ ಹುಬ್ಬಳ್ಳಿಗೆ ಬಂದಿದ್ದ ಕನ್ನಡದ ಪ್ರಗತಿಶೀಲ ಕವಿ ಶ್ರೀ ಎಸ್. ಆರ್. ಎಕ್ಕುಂಡಿ ನಮ್ಮಲ್ಲಿಗೆ ಬಂದವರು, ಅಲ್ಲೆ ಕುಳಿತಲ್ಲೆ, ದಿವಂಗತ ಮಯಾಕೋವ್‌ಸ್ಕಿಯ "ಕ್ರಾಂತಿಪಡೆಯ ಮುನ್ನಡೆ"ಎಂಬ ಹಾಡನ್ನು ಕನ್ನಡಿಸ ಹೊರಟರು.

ನಮ್ಮ ಎಡಬದಿಯಲ್ಲಿ ದೊಡ್ಡ ಸಿಲಿಂಡರ್ ಮುದ್ರಣಯಂತ್ರ ಶಬ್ದಿಸು ತಿತ್ತು. ಬಲಬದಿಯಲ್ಲಿ ಮೊಳೆ ಜೋಡಿಸುವ ವಿಭಾಗದಲ್ಲಿ ಹತ್ತಾರು ಜನ ಕೆಲಸ ಮಾಡುತಿದ್ದರು. ಹೊರಗೂ ಒಳಗೂ ಕಿವಿಯೊಡೆಯುವ ಸದ್ದಾಗು ತಿತ್ತು. ಆದರೂ ಎಕ್ಕುಂಡಿ ಐದೇ ನಿಮಿಷಗಳಲ್ಲಿ ಮಯಾಕೋವ್‌ಸ್ಕಿಯ ಹಾಡಿನ ಭಾವಾನುವಾದವನ್ನು ಮಾಡಿದರು.

ಹೀಗೆ ಬರೆಯುವುದೇ ಮಯಾಕೋವ್‌ಸ್ಕಿಯ ಪರಂಪರೆ—ಎಂದು ನಾನು ಭಾವಿಸುತಿದ್ದಾಗಲೇ ಶಿವೇಶ್ವರ ಇನ್ನೊಂದೆಡೆ ಕುಳಿತು "ಸೋವಿಯೆಟ್ ಬಾಂಧವರಿಗೆ" ಎಂಬ ಇಪ್ಪತ್ತು ಸಾಲುಗಳ ಹಾಡು ಬರೆದರು. ಅದೂ ಧಾರಾ ಕಾರವಾಗಿ ಹರಿಯಿತು. ನಾನು ಮೂಕನಾಗಿ ಕುಳಿತಲ್ಲೇ ಕುಳಿತೆ.

**"ಉರಿ ರೂಪವಾಂತು, ಸ್ವಾತಂತ್ರ್ಯ ಬಂತು, ಅರೆಜೀವ ನಾಡಜೀವ ;**
**ಸುಖಸಮತೆ ಸಹಿಯ ಹೆಗ್ಗಳಿಕೆಯಾಸೆ; ನೀಗುವೆವು ನಿತ್ಯನೋವ ;**
**ಈ ಸುಡುವ ನೆಲಕೆ, ಈ ದುಡಿವ ಕುಲಕೆ, ನಗೆಸಲಿಗೆ ಬಹುಸುದೂರ**
**ನೆಲೆನಿಲ್ಲಲೆಂದು ಸೌಹಾರ್ದಭಾವ ಹೂಡುವೆವು ನೂರು ಸಮರ !"**

—ಇವು ಮೊದಲ ನಾಲ್ಕು ಸಾಲು.

**"ಮನದಂದು ನಿಮ್ಮ ಸಾಹಸದ ದಿವ್ಯ ಸ್ಫೂರ್ತಿಪ್ರಹಪೂರ್ಣದಿರವ,**
**ವಂದಿಸುವೆವಿಂದು, ಬಂಧುತ್ವ ಬಲದ ಹಾರೈಕೆಯಿಂಬು ಸ್ವರವ**
**ಆಲಿಸಿರಿ, ನೀವು ಜಗದೆಲ್ಲ ಚರಿತೆಯುನ್ನತಿಗೆ ಇತ್ತ ನೆರವು,**
**ಮರೆಯಾಗದಖಿಲ ಜನಕೋಟಿಯೆದೆಯ ತುಂಬಿಹುದು ನಿಮ್ಮ ಕುರುಹು !"**

—ಇವು ಕೊನೆಯ ನಾಲ್ಕು ಸಾಲು.

ಬರೇ ಒಂದು ಸಲದ ಪರಿಚಯದಿಂದ, ಇಂಥ ಪ್ರತಿಭೆ ಈ ವ್ಯಕ್ತಿಯಲ್ಲಿದೆ ಎನ್ನುವುದನ್ನು ಯಾರೂ ತಿಳಿಯುವಂತಿರಲಿಲ್ಲ. ಅಷ್ಟು ವಿನಯಶೀಲರು ಅವರು! ಆದರೆ ಅವರೆಷ್ಟು ವಿನಯಶೀಲರೋ ಅದೇ ರೀತಿ ಅವರ ವಿಚಾರ ವೈಖರಿಯೂ ಖಂಡತುಂಡ!

ಶಿವೇಶ್ವರ, ಹೊಸ ಹೊಸ ಪದಗಳನ್ನು ಹೇರಳವಾಗಿ ಉಪಯೋಗಿಸುತಿದ್ದರು. ಶ್ರಮಜೀವಿ ಚಳುವಳಿಯ ಪರಿಚಯವಿರುವವರಿಗೆ "ಲಾಲ್‌ಸಲಾಂ" ಎಂಬ ಪದಪ್ರಯೋಗ ಹೊಸತಲ್ಲ. ಹಾಗೆಯೇ "ವಿಪ್ಲವ ವಂದನೆ" ಎನ್ನುವುದು ಕೂಡಾ. ಇದರ ಜೊತೆಗೆ "ರಕ್ತ ನಮಸ್ಕಾರ" ಎಂದು ಮೊದಲು ಪ್ರಯೋಗಿಸಿದ ಕೀರ್ತಿ ಶಿವೇಶ್ವರರಿಗೆ ಸಲ್ಲುವುದು.

ಆದರೆ ದಿನದಿಂದ ದಿನಕ್ಕೆ ಅವರ ಆರೋಗ್ಯ ಕೆಡುತ್ತಾ ಹೋಯಿತು. ಅವರು ಆರೈಕೆಯನ್ನು ಕಡೆಗಣಿಸಿದರು. ಬೆಳೆಯುತ್ತಲಿದ್ದ ಮಾನಸಿಕ ಚಿಂತೆಯನ್ನು ಅವರು ಸರಪಳಿ ಸಿಗರೇಟಿನಿಂದ ಸುಡತೊಡಗಿದರು. "ಜನಶಕ್ತಿ" ಯಲ್ಲಿನ ಚಟುವಟಿಕೆ, ಚಳುವಳಿಯ ಚಿಂತನೆ, ಇವು ಮಾತ್ರ ಅವರ ಏಕಾಗ್ರತೆಯನ್ನು ಉಳಿಸುವ ಸಾಧನಗಳಾಗಿದ್ದುವು.

ಅವರು ತುಂಬ ಸ್ನೇಹಮಯಿ. ಈಗ ಪ್ರಸಿದ್ಧರಾಗಿರುವ ಉತ್ತರ ಕರ್ನಾಟಕದ ಹಲವು ಪ್ರಮುಖ ಯುವಕ ಲೇಖಕರಿಗೆ ಆ ಗೆಳೆತನದ ಅನುಭವವಿದೆ.

ಅಂಥ ಬಂಧುತ್ವಕ್ಕೆ, ಧಾರವಾಡದ ಪ್ರಮುಖ ಯುವ ಕವಿಯಾದ ಚೆನ್ನವೀರ ಕಣವಿ ಮತ್ತು ಶಿವೇಶ್ವರರ ಸಂಬಂಧವೇ ಒಂದು ನಿದರ್ಶನ. "ಜನಶಕ್ತಿ" ಕಾರ್ಯಾಲಯದಿಂದ ಪ್ರತಿದಿನವೂ ಹೊರಬಿದ್ದ ಮೇಲೆ ಅವರು ಧಾರವಾಡ ಸೇರಿ ಕಣವಿಯವರ ಜತೆಯಲ್ಲಿ ಕಾಲಕಳೆಯುತಿದ್ದರು.

ದೃಷ್ಟಿದೋಷದಿಂದಾಗಿ ಪುಸ್ತಕಗಳ ಸಹವಾಸವೂ ಅವರಿಗೆ ದೊರೆಯದೆ ಹೋಯಿತು. ಮೌನವೊಂದೇ ಮನಕೊರೆಯುವ ಸಂಗಾತಿಯಾಯಿತು.

**ದಬ್ಬಾಳಿಕೆಯನ್ನಿದಿರಿಸಿ—**

೧೯೪೮ರ ಮಾರ್ಚ್-ಏಪ್ರಿಲ್ ತಿಂಗಳಲ್ಲಿ ಆರಂಭವಾದ ಸಾರ್ವತ್ರಿಕ ದಬ್ಬಾಳಿಕೆ "ಜನಶಕ್ತಿ"ಯ ಸಂಪಾದಕೀಯ ಮಂಡಲವನ್ನು ಚಲ್ಲಾಪಿಲ್ಲಿ ಮಾಡಿತು. ಕೃಶವಾದರೂ "ಜನಶಕ್ತಿ" ಮತ್ತೂ ಒಂದು ವರ್ಷ, ನಿಷೇಧಾಜ್ಞೆ

ಬರುವ ತನಕ, ತನ್ನ ಕರ್ತವ್ಯಪಾಲನೆಯಲ್ಲಿ ಹಿಂದಾಗಲಿಲ್ಲ. ಆದರೆ ಅನಾರೋಗ್ಯದೆದುರಲ್ಲಿ ಶಿವೇಶ್ವರ ಅಸಹಾಯರಾದರು.

ಒಂದೆಡೆ ಅನಾರೋಗ್ಯ, ಇನ್ನೊಂದೆಡೆ ಆರ್ಥಿಕ ಸಂಕಷ್ಟ, ಬಾಳಿನ ಎಲ್ಲ ಕಹಿ ಒಮ್ಮೊಮ್ಮೆ ಹುಚ್ಚೆದ್ದು ಕುಣಿದು ತಂದೊಡ್ಡುತಿದ್ದ ಮಾನಸಿಕ ವ್ಯಥೆ-ಇಷ್ಟರ ಜತೆಯಲ್ಲಿ ಪೋಲೀಸರ ಕಾಟವನ್ನೂ ಅವರು ಸಹಿಸಬೇಕಾಯಿತು.

ಹೀಗಿದ್ದರೂ ಅವರು, ತನ್ನೆದುರು ವಿಶ್ವವ್ಯಾಪಿಯಾಗಿ ಭಾಸವಾಗುತಿದ್ದ ಮಹಾ ಆಂದೋಲನದ ಸಾಮೀಪ್ಯದಿಂದ ಎಂದೂ ದೂರ ಹೋಗಲಿಲ್ಲ.

ಮರಣಕ್ಕೆ ಒಂದು ವರ್ಷಕ್ಕೆ ಹಿಂದೆ ಅವರನ್ನು ಕಂಡಿದ್ದೆ. ಅದೇ ಸರಳ ಜೀವ. ಚಿಂತಾಕ್ರಾಂತವಾಗಿದ್ದರೂ ಆಗಾಗ್ಗೆ ಮುಗುಳ್ನಗುತಿದ್ದ ಮುಖ. ಅದೇ ಖಡಾಖಂಡಿತವಾದ....ಕಣ್ಣು ನೋವು ಸ್ವಲ್ಪ ಸುಧಾರಿಸಿದಂತಿತ್ತು ಆಗ.

ರಾತ್ರಿ ಸ್ವಲ್ಪ ದೂರ ನಾನು ಹೋಗಬೇಕಾಗಿತ್ತು. ಸೈಕಲಿನ ಮೇಲೆ ನನ್ನನ್ನು ಒಯ್ದು ಮುಟ್ಟಿಸುವುದಾಗಿ ಶಿವೇಶ್ವರ ಹೇಳಿದರು. ಆ ದೇಹಸ್ಥಿತಿಯಲ್ಲಿ ಅವರು ಆ ಕೆಲಸ ಮಾಡಬಾರದೆಂದು ಹೇಳಿದರೂ ಅವರು ಕೇಳಲಿಲ್ಲ. ಡಬ್ಬಲ್ ರೈಡ್ ಅಪಾಯ—ಎಂದು ಹೇಳಿ ಅವರ ಮನಸ್ಸು ನೋಯಿಸುವಂತೆಯೂ ಇರಲಿಲ್ಲ.

ನಗರದ ಹೊರ ವಲಯದವರೆಗೂ ಪ್ರತ್ಯಪ್ರತ್ಯೇಕವಾಗಿ ನಡೆದುಹೋಗಿ ಅಲ್ಲಿಂದ ಸೈಕಲನ್ನೇರಿದೆವು. ಡಬಲ್‌ರೈಡ್ ಮಾಡಿ ಅವರು ನನ್ನನ್ನು ಒಯ್ದು ಮುಟ್ಟಿಸಿದರು....ಯಾವ ನಿಮಿಷ ಬೇಕಾದರೂ ವಾಹನ ಮುಗ್ಗರಿಸುವ ಅವಕಾಶವಿದ್ದರೂ, ಬಂಧುವಿನ ಆದರ-ವಿಶ್ವಾಸಗಳಿಗೆ ಮಾರು ಹೋಗಿ ನಾನು ನಿಶ್ಚಿಂತನಾಗಿದ್ದೆ. ಆ ಊರಿನ ಬೀದಿಗಳೇ ಅವರ ರಕ್ಷಣೆಗೆ ನಿಂತಂತಿದ್ದುವು.

ಅದೇ ಅವಧಿಯಲ್ಲಿ ನಮ್ಮ ಒಬ್ಬರು ಬಂಧುವಿನ 'ಇರುವಿಕೆ'ಗೆ ತಾತ್ಕಾಲಿಕ ವ್ಯವಸ್ಥೆ ಮಾಡಬೇಕಾಗಿತ್ತು. ಆ ಮಾತು ಬಂದೊಡನೆಯೇ ದೊಡ್ಡಮನಿ ಆ ಹೊರೆಹೊತ್ತರು. "ರಕ್ಷಣೆ"ಯ ಎಲ್ಲ ಭಾರ ತನ್ನದೆಂದರು. ಅಪಾಯ–ಗಂಡಾಂತರದ ಬಗ್ಗೆ ಒಂದು ಕ್ಷಣವೂ ಅವರು ಯೋಚಿಸಲಿಲ್ಲ.

ಅವರ ನವಿಲೂರಿನ ಹಳ್ಳಿ....ಆ ಕೊನೆಯ ಭೇಟಿ....

ಮೋಟಾರು ರಸ್ತೆಯ ಬದಿಯಲ್ಲೇ ಅಲ್ಲೊಂದು ಹೋಟೆಲಿದೆ. ಅದೊಂದು ಮುರುಕು ಗುಡಿಸಲು. ತಲೆಬಾಗಿ ಒಳಹೋಗಬೇಕು.

ಆ ರಾತ್ರೆ, "ಚಾ, ಕುಡಿಯೋಣ" ಎಂದರು ಶಿವೇಶ್ವರ, ಗೆಳೆತನದ ಆರಂಭದ ದಿನಗಳಲ್ಲಿ ನಾವು ಜತೆಯಾಗಿ ಚಹಾ ಕುಡಿಯುತ್ತಿದ್ದ ಹಾಗೆ.

ಅವರ ಆಹ್ವಾನವನ್ನು ಅಲ್ಲಗಳೆಯಲು ಅತಿ ಕಠಿನ ಮನಸ್ಸೇ ಬೇಕು.

"ಯಾರೋ ಜನರಿದ್ದಂತಿದೆ.... ಖಾಕಿಧಾರಿಗಳು" ಎಂದೆ.

ಅವರೊಬ್ಬರೇ ಹತ್ತಿರ ಹೋಗಿ ನೋಡಿಬಂದರು. ಒಳಗಿದ್ದವರು ಸಮೀಪದಲ್ಲೇ ಯಂತ್ರ ಕೆಟ್ಟಿದ್ದ ಯಾವುದೋ ಮೋಟಾರಿನ ಡ್ರೈವರ್-ಕಂಡಕ್ಟರುಗಳು.

"ಬರ್ರೀ-" ಎಂದರು ಶಿವೇಶ್ವರ.

ಸದ್ದಿಲ್ಲದೆ ಒಳಹೋಗಿ ನೆಲದಮೇಲೆ ಮೂಲೆಯಲ್ಲಿ ಕುಳಿತು ಒಂಭತ್ತು ಕಾಸಿನ ಸ್ಪೆಶಲ್ ಚಾ ಕುಡಿದೆವು.

ನಸುಬೆಳದಿಂಗಳಿತ್ತು....

ಅವರು ಹಳ್ಳಿಯಲ್ಲಿದ್ದ ತಮ್ಮ ಮನೆಯತ್ತ ಹೊರಟರು. ಮತ್ತೊಮ್ಮೆ ಸಿಗುವ ಆಶ್ವಾಸನೆ ಕೊಟ್ಟು ನಾನು ಹುಬ್ಬಳ್ಳಿಯತ್ತ ಸಾಗಿದೆ.

ಅದು ಮತ್ತೆ ಬರದೇಹೋದ 'ಮತ್ತೊಮ್ಮೆ'. ವಿಷಮುಜ್ವರಕ್ಕೆ ತುತ್ತಾಗಿ ಶಿವೇಶ್ವರರು, ೧೯೫೦ರ ಮಾರ್ಚ್ ೨೬ ರಂದು ನಡುವಿರುಳು ದಾಟಿದಾಗ, ಕೊನೆಯ ಉಸಿರೆಳೆದರು.

**ಇತಿಹಾಸದಲ್ಲಿ ಅವರ ಸ್ಥಾನ**

ಈಗಿನ ಆಳುವ ವರ್ಗದ ಸೇವೆಯಲ್ಲಿ ನಿರತರಾಗಿರುವ ಸಾಹಿತಿಯೊಬ್ಬರು ಒಂದು ಲೇಖನ ಬರೆದು, ದಿವಂಗತ ಶಿವೇಶ್ವರರನ್ನು 'ಹೊಗಳಿ', ಅವರು ಸೇರಿದ್ದ ಚಳುವಳಿಯನ್ನು ನಿಂದಿಸಿದ್ದಾರೆ.

ತಾವೇ ಆಳುವ ವರ್ಗವಾಗಬೇಕೆಂದು ಚಡಪಡಿಸುತ್ತಿರುವ ಮತ್ತೊಂದು ರಾಜಕೀಯ ಪಕ್ಷದ ವ್ಯಕ್ತಿಯೊಬ್ಬರು ತಾವೂ ಒಂದು ಲೇಖನ ಬರೆದು, ಶಿವೇಶ್ವರರನ್ನು "ಹೊಗಳುವ" ನೆಪಮಾಡಿ, ಚಳುವಳಿಯನ್ನು ನಿಂದಿಸುತ್ತ, ಶಿವೇಶ್ವರರ ಎಳೆಯ ಜೀವನದ ಮಹತ್ತರವಾದ ಒಂದು ಅಧ್ಯಾಯಕ್ಕೇ ಮಸಿ ಬಳಿಯಲು ಯತ್ನಿಸಿದ್ದಾರೆ.

ಇವರೆಲ್ಲ ಚಂದ್ರಬಿಂಬದತ್ತ ಯಾಕೆ ಉಗುಳುವರೋ ತಿಳಿಯದು.

ಅಳಿದ ಸೋದರನೊಬ್ಬನ ನೆನಪು ಮಾಡುತ್ತಿರುವ ಈ ಸಂದರ್ಭದಲ್ಲಿ ಅವರೆಲ್ಲರ ಬಗ್ಗೆ ನಾನು ಬರೆಯಲಿಚ್ಛಿಸುವುದಿಲ್ಲ.

ಪುಷ್ಕಿನ್ ಕ್ರಾಂತಿಕಾರಿಯೇ ಆಗಿರಲಿಲ್ಲ ಎಂದು ಸಾಧಿಸಿದವರುಂಟು. ಮ್ಯಾಕ್ಸಿಂ ಗಾರ್ಕಿಯು ಸೋವಿಯೆಟ್ ಪದ್ಧತಿಗೆ ವಿರೋಧಿಯಾಗಿದ್ದ–ಎಂದವರುಂಟು. ಕ್ರಾಂತಿಕಾರಿ ಮಯಾಕೋವ್‌ಸ್ಕಿಯ ಮರಣಕ್ಕೆ ಸೋವಿಯೆಟ್ ರಾಜ್ಯವೇ ಕಾರಣವೆಂದವರುಂಟು!

ಹೋರಾಟದ ಪರಂಪರೆಯನ್ನೆತ್ತಿ ಹಿಡಿದ ಶಿವೇಶ್ವರರ ಬಗ್ಗೆ, ಆ ರೀತಿಯಲ್ಲೇ ನಿಂದಿಸಿ ಬರೆಯುವವರು, ನಿಜಕ್ಕೂ ಶಿವೇಶ್ವರರನ್ನು ಗೌರವಿಸುತ್ತಿದ್ದಾರೆ!

ನಮ್ಮ ಬುದ್ಧಿಜೀವಿ ಯುವಜನಾಂಗದ ಒಂದು ವಿಭಾಗ, ವರ್ಗ ಜಾಗೃತಿಯ ಕಾಲಘಟ್ಟದಲ್ಲಿ, ಕರ್ನಾಟಕದ ಶ್ರಮಜೀವಿ ಜನಸಮುದಾಯದೊಡನೆ ಒಂದಾಗಲೆಳಸಿತು. ಆ ವಿಭಾಗದ ಪ್ರತಿನಿಧಿ ಶಿವೇಶ್ವರ ದೊಡ್ಡಮನಿ. ಅವರ ಹೆಸರು ಚಿರಸ್ಥಾಯಿಯಾಗುವುದು. ಅಪಪ್ರಚಾರದ ಹೊದಿಕೆ ಹೊದಿಸಿ ಅವರ ನೆನಪಿನ ಮೇಲೆ ಗೋರಿಕಟ್ಟುವುದು ವ್ಯರ್ಥಯತ್ನವೇ ಸರಿ.

ಈ ದಿನ ಪರಿಸ್ಥಿತಿ ಏನೇ ಇರಲಿ; ನಾಳೆ ಅದು ಬದಲಾಗಿಯೇ ತೀರುವುದು.

ಭವಿಷ್ಯತ್ತಿನ ನಿರ್ಮಾತೃಗಳಾದ, ತಮ್ಮ ಗುರಿಯನ್ನು ತಾವೇ ರೂಪಿಸುವ ಸಾಮರ್ಥ್ಯವುಳ್ಳ, ಇತಿಹಾಸದ ಸಾಧನಗಳಾದ, ಉದಯಿಸಲಿರುವ ಹೊಸ ಸಮಾಜದ ಶಿಲ್ಪಿಗಳಾದ, ಕರ್ನಾಟಕದ ಶ್ರಮಜೀವಿಗಳು ಶಿವೇಶ್ವರರನ್ನು ನೆನಪಿಡುವರು!

ಅವರ ನೆನಪಿಗಾಗಿ ಇಲ್ಲಿ ಮುಕ್ತಾಯದ ಮಾತೆಂದರೆ, ಅವರಿಗೆ ಪ್ರಿಯವಾಗಿದ್ದ ಪದಪ್ರಯೋಗ–ರಕ್ತನಮಸ್ಕಾರ! ಸೋದರ ಶಿವೇಶ್ವರಗೆ ಅಂತಿಮ ರಕ್ತನಮಸ್ಕಾರ!

**ಜೂಲೈ ೧೯೫೧**
**ಬೆಂಗಳೂರು**

**—ನಿರಂಜನ**

# ನಮ್ಮ ನಡುವಿನ ಗೋಡೆ

ಪ್ರಿಯೆ........

ನೀನು ಟ್ರಾಮಿನಲ್ಲಿ ಎಲ್ಲಿ ಯಾವಾಗ ಕುಳಿತುಕೊಂಡೆಯೋ ಅದರ ಅರಿವು ನನಗಿರಲಿಲ್ಲ. ಹಣ ಕೇಳಿದಾಗ ಮಾತ್ರ ನಿನ್ನನ್ನು ಗುರುತಿಸಿದೆ. ನೀನು ಅಲ್ಲಿ-ಅದೂ ನಾನು ಕೆಲಸ ಮಾಡುವ ಟ್ರಾಮಿನಲ್ಲಿ-ಬಂದುದೇ ನನಗೊಂದು ಆಶ್ಚರ್ಯವಾಯಿತು. ನನ್ನ ಕೆಲಸದಲ್ಲಿ ನಾನು ನಿರತನಾಗಿ ಪಯಣಿಗರನ್ನು ನಿರೀಕ್ಷಿಸುತಿದ್ದಾಗ, ನೀನು ನನ್ನೆಡೆಗೆ ನೋಟ ಬೀರಿದೆ. ಆಗ ನಿನ್ನ ಮುಖ ಹಿಗ್ಗಿರಲಿಲ್ಲ. ದೀರ್ಘ ಕಾಲಾನಂತರದ ನಮ್ಮ ಭೇಟಿ ಹೀಗೆ ಕೊನೆಗಾಣುವುದೆಂದು ನಾನೆಣಿಸಿರಲಿಲ್ಲ.

ನಾನು ಟ್ರಾಮ್ ಕಂಡಕ್ಟರನಾಗಿರುವ ಕಾರಣವೊಂದೇ ನಿನ್ನನ್ನು ಬಲವಾಗಿ ಘಾಸಿಗೊಳಿಸಿರಬೇಕು. ಹೌದು, ನಿಜ. ನನ್ನ ಸ್ಥಿತಿಯನ್ನು ಅರಿತೊಡನೆ ಒಮ್ಮೆಲೆ, ನನ್ನ ಮೇಲಿದ್ದ ಪ್ರೇಮ ಆದರವನ್ನೆಲ್ಲ ನೀನು ಹಾಳು ಸುರಿಸಿದಾಗಲೇ, ನಾನದನ್ನು ಊಹಿಸಿದೆ.

ನನ್ನಲ್ಲಿ ಮತ್ತೆ ಮಗುತನ ತಲೆದೋರಿತ್ತು. ನಿನ್ನೊಡನೆ ಮಾತನಾಡಬೇಕೆಂದು ಮನ ಹವಣಿಸುತಿತ್ತು. ಆತುರ ನೂರ್ಮಡಿಸುತಿತ್ತು. ನನ್ನಂತಹ ಸಾಮಾನ್ಯನೂ ನಿನ್ನಂತಹ ಶ್ರೀಮಂತ ಯುವತಿಯೊಡನೆ ಪ್ರೇಮದ ಮಾತಾಡುತ್ತಾನಲ್ಲಾ—ಎಂದು ಉಳಿದ ಜನ ಬೆರಗುಗೊಳ್ಳಲೆಂಬುದೇ ನನ್ನ ಬಯಕೆಯಾಗಿತ್ತು.

ನನ್ನ ಕೆಲಸದೊಂದು ಸುತ್ತು ಮುಗಿಸಿ, ಮತ್ತೆ ನೀನಿದ್ದ ಸ್ಥಳದೆಡೆಗೆ ನಾನು ಧಾವಿಸಿದೆ. ಅಲ್ಲಿರಲಿಲ್ಲ ನೀನು. ಯಾವುದೋ ನಿಲ್ದಾಣದಲ್ಲಿ ಇಳಿದುಬಿಟ್ಟಿದ್ದೆ. ಮಹಾ ಮೌನದ ಒಡತಿಯಾಗಲು ನೀನು ದೂರ ಹೋಗಿದ್ದೆ.

........ಆಮೇಲೆ ಒಂದು ದಿನ ಅನಿರೀಕ್ಷಿತವಾಗಿ ನಿನ್ನಿಂದ ಒಂದು ಓಲೆ ಬಂತು : ಟ್ರಾಮಿನಲ್ಲಿ ಎಷ್ಟೊಂದು ಜನ ಸುಶಿಕ್ಷಿತರು, ಧನಿಕರು, ಬುದ್ಧಿಜೀವಿ-

ಗಳಿದ್ದರು ? ಎಣಿಕೆಗೆ ಹತ್ತದಷ್ಟು. "ಅವರೆದುರು ನೀನು ನನ್ನನ್ನು ಮಾತಾಡಿಸಿದ್ದರೆ ನನ್ನ ಮಧ್ಯಮ ವರ್ಗದ ಜೀವದ ವೈಭವಕ್ಕೆ ಕಲಂಕ ತಟ್ಟುತಿತ್ತು. ಅಂತೂ ಪಾರಾದೆ. ನೀನು ನನ್ನೊಡನೆ ಮಾತು ಬಿಚ್ಚಲಿಲ್ಲ!" ಅಷ್ಟೇ ಅಲ್ಲ, ನಿನ್ನಂತಹ ಸಿರಿವಂತರೊಡನೆ ನಾನು ಹೇಗೆ ವರ್ತಿಸಬೇಕೆಂಬುದನ್ನೂ ವಿವರಿಸಿ ಎಚ್ಚರ ಹೇಳಿದ್ದೆ. "ಹಿಂದೆ ಹಿರಿಯಾಸೆ ಉಚ್ಚ ಭಾವನೆಗಳನ್ನರಿತ ನೀನು, ಈಗ ಒಮ್ಮಿಂದೊಮ್ಮೆ ಈ ಟ್ರಾಮ್ ಕಂಡಕ್ಟರನಂಥ ವೃತ್ತಿಗೇಕೆ ಜೀವ ಮುಡಿಪಿಟ್ಟೆ?" ಎಂದೂ ಕೇಳಿದ್ದೆ.

ಆಗ ನಿನಗೆ ಮಾರೋಲೆ ಬರೆಯುವುದಾಗಲಿಲ್ಲ. ಬರೆದಿದ್ದರೂ ಆ ಓಲೆ ನಿನ್ನಲ್ಲಿ ಪರಿವರ್ತನೆಯನ್ನುಂಟುಮಾಡೀತೆಂಬ ಧೈರ್ಯ ನನಗಿರಲಿಲ್ಲ.

ಈ ದಿನವೇಕೋ ಬರೆಯಬೇಕೆನ್ನಿಸಿತು.

ಜನವರಿ ೨೧ರಿಂದ ಏಪ್ರಿಲ್ ೧೬ರವರೆಗೆ! ಈ ಮೂರು ತಿಂಗಳಿನ ಸಂಧಿ ಕಾಲದಲ್ಲಿ ನಮ್ಮ ಕಾರ್ಮಿಕ ಜಗತ್ತಿನಲ್ಲಾದ ಬದಲಾವಣೆಯ—ಕ್ರಾಂತಿ ಕಹಳೆಯ ಕೂಗನ್ನು, ಮತ್ತೊಮ್ಮೆ ನಿನ್ನ ಕರ್ಣಪಟಲಕ್ಕೆ ತಾಗಿಸುವೆ. ಆ ಕೂಗಿಗೆ ಎಚ್ಚೆತ್ತು ನಮ್ಮ ದೇಶದ ನಿಜೋನ್ನತಿಗಾಗಿ ಹೆಣಗುವ ನನ್ನಂತಹ ಜೀವಕೋಟಿಗಳನ್ನು ನೀನು ನೆನೆ. ಆಗ ದೇಶವನ್ನೆಲ್ಲ, ಕತ್ತಲೆ ಘೋರ ವಳ್ಳುರಿಗಳು ಮುತ್ತಿ, ಒಂದೇ ಒಂದು ತುತ್ತಾಗಿ ಸ್ವಾಹಾ ಮಾಡಲು ಹೊಂಚುಹಾಕುತಿದ್ದುವು. ಆಗ, ಜೀವನಪರೀಕ್ಷೆಯ ವಿಷಮ ವೇಳೆಯನ್ನೆದುರಿಸಲು ಟ್ರಾಮ್ ಕೆಲಸಗಾರರಾದ ೮೦೦೦ ಹಿಂದೂ-ಮುಸಲ್ಮಾನರು ನಾವು ಒಂದಾದೆವು. ನಮ್ಮ ಕಷ್ಟನಷ್ಟಗಳಿಗೆ ಚ್ಯುತಿ ಕೊಡಲು, ಹೋರಾಡಿ ನವ ಜೀವನದ ತಳಹದಿಯನ್ನು ಭದ್ರಗೊಳಿಸಲು, ನಿರತರಾದೆವು.

ಹಿಂದೂ ಮುಸಲ್ಮಾನರು ನಾವು ಸಹಭುಜರಾಗಿ, ದೇಶ ಪರದೇಶಗಳ ಹಿರಿ ಬಂಡವಾಳಗಾರರ ವಿರುದ್ಧ ಹೋರಾಟ ಹೂಡಿದೆವು. ಧನಿಕ-ಜನಸಾಮಾನ್ಯರ ನಡುವಿನ ಮಹದಂತರವನ್ನು ನೀಗಲೆಂದೇ ನಾವು ತೋಳೇರಿಸಿದೆವು. ಕೊನೆಗೊಮ್ಮೆ ನಮ್ಮ ಹೋರಾಟಕ್ಕೆ ಗೆಲುವಾಯಿತು. ಶೋಷಕ ವರ್ಗ ತಲೆಬಾಗಿತು.

ಏಪ್ರಿಲ್ ೧೭. ಆ ದಿನ ಕಲಕತ್ತೆಯಲ್ಲೆಲ್ಲ ನಮ್ಮ ವಿಜಯೋತ್ಸಾಹವನ್ನು ಪ್ರದರ್ಶಿಸಿದೆವು. ನಮ್ಮ ಮುಖಂಡರು, ಕುಸಿಯುತ್ತಿದ್ದ ಜೀವಗಳನ್ನೆಲ್ಲ

ಕತ್ತಲೆಯ ಗಡಿಯಿಂದ ದಾಟಿಸಿ, ಬೆಳಕಿನ ದಾರಿ ತೋರಿಸಿದರು. ಜನತೆಯ ಈ ಜೀವನಸಮರವನ್ನು ಬಗ್ಗು ಬಡೆಯಲೆಂದು, ಬಂಗಾಲದ ಶೋಷಕರು ಒಡ್ಡಿದ ಅಡ್ಡಿ ಆತಂಕ ನೂರಾರು. ನಮ್ಮ ಮೆರವಣಿಗೆಯನ್ನು ವಿಫಲಗೊಳಿಸುವ ಯತ್ನವಾಯಿತು. ಹಿಂಜರಿಯಲಿಲ್ಲ ನಾವು. ಕೆಂಬಾವುಟವನ್ನೆತ್ತಿ, ಎದೆಗಾನಿಸಿ ಹಿಡಿದು, ರಕ್ತ-ಗೀತೆಯನ್ನು ಹಾಡಿದೆವು. ನಮ್ಮ ಕೆಚ್ಚಿನ ಪ್ರದರ್ಶನ ಮಾಡಿದೆವು. ಅವರಾಟ ಮುರಿಯಿತು. ಮುಖ ಬಣಗುಟ್ಟಿತು. ಅವರ ಸಿರಿ-ಸೌಧಗಳಿಗೆಲ್ಲ ಬೂದಿ ಅಡರಿತು !

ಜೂನ್ ೨೯. ನಾವಿಕರ ಬಂಡಾಯದಲ್ಲಿ ಜೀವ ಬಿಟ್ಟವರ ನೆನಪಿಗೆಂದು, ಹೊಸ ಹುಮ್ಮಸಿನಿಂದ ನಾವೆಲ್ಲ, ಕಲ್ಕತ್ತೆಯ ಹಾದಿ ಬೀದಿಯ ಕೆಲ ಬಲಗಳನ್ನಾವರಿಸಿ ಸಾಗಿದೆವು. ನಮ್ಮ ರಣಗೀತೆಯ ಒಕ್ಕೊರಲಿನ ಗಡಸು ಗಾಂಭೀರ್ಯಕ್ಕೆ, ಆ ವೀರ ಯೋಧರ ಸ್ಮರಣೆಯಿಂದ ಮತ್ತಷ್ಟು ವೀರಾವೇಶ ಬರಲೆಂದು ಹಾರೈಸಿದೆವು. ಆ ಅಳಿದ ಜೀವಗಳೆಲ್ಲ ಮೌನ ತಾಳಿ ರಕ್ತ ಸಂದೇಶವನ್ನಿತ್ತರು ನಮಗೆ.

ನಮ್ಮ ಹೋರಾಟಕ್ಕೆ ಮೆಚ್ಚಿ ಬಂಗಾಲದ ಹಿರಿಯ ಪ್ರಗತಿಶೀಲ ಲೇಖಕ ಮಣಿಕ್ ಬಂದೋಪಾಧ್ಯಾಯರು "ಸ್ವಾಧೀನತಾ" ಪತ್ರಿಕೆಯಲ್ಲಿ ಹೀಗೆ ಬರೆದರು :

"ಟ್ರಾಮಿನ ಕೆಲಸಗಾರರಾದ ನನ್ನ ಸಂಗಾತಿಗಳೇ, ನೀವು ಪಡೆದ ವಿಜಯಕ್ಕಾಗಿ ಎದೆ ತುಂಬಿದ ಆವೇಶದಿಂದ ನಾನು ಧನ್ಯವಾದಗಳನ್ನರ್ಪಿಸುವೆ-ಸ್ವೀಕರಿಸಿ! ಲೇಖನಿಯ ನೆರವಿಂದ ಹೊಟ್ಟೆ ಹೊರೆದುಕೊಳ್ಳಲು ಹೊರಟ ಲೇಖಕನೊಬ್ಬನ ವಂದನೆಗಳನ್ನು ಸ್ವೀಕರಿಸಿ ! ಈ ನಿಮ್ಮ ವಿಜಯದಿನವನ್ನು ನಾಡು ಮರೆಯುವಂತಿಲ್ಲ. ಈ ನಿಮ್ಮ ವಿಜಯ, ಕೊನೆಯ ಹೋರಾಟದ ಅವಧಿಯನ್ನು ತೀರ ಸಮೀಪಕ್ಕೆ ತಂದುಕೊಡಲು, ಗುರಿ ಮುಟ್ಟಿಸಲು, ನಾಡಿಗೆಲ್ಲ ನೆರವು ನೀಡುವಂತಿದೆ."

ಆ ಸಂದೇಶ ನಮ್ಮಲ್ಲೆಲ್ಲ ಹೊಸ ಉತ್ಸಾಹ ಹುಟ್ಟಿಸಿತು. ಮನದ ಸಡಿಲುತನವನ್ನು ಕಡಿದೊಗೆಯಿತು. ಆ ಸಂದೇಶ ಕಳಿಸಿದ ಸಾಹಿತಿ ನಮ್ಮಂತೆಯೇ ಹೋರಾಟ ಪ್ರೇಮಿ ಎಂದರಿತೆವು. ನಮ್ಮ ನಾಡಿನ ಬರೆಹಗಾರರೆಲ್ಲ ಬಂದೋಪಾಧ್ಯಾಯರ ಅನುಯಾಯಿಗಳಾದರೆ ನಮ್ಮಂಥ ಕಾರ್ಮಿಕರಿಗೆ ಎಷ್ಟು

ಹಿಗ್ಗು—ಎಂದು ಉದ್ಗಾರ ತೆಗೆದೆವು. ಇತರ ಲೇಖಕರೂ ನಮ್ಮೆಡೆಗೆ ದೃಷ್ಟಿ ಬೀರಬೇಕೆಂದು ಆಹ್ವಾನಿಸಿದೆವು.

ಈ ಹೋರಾಟ ನಡೆಸುವವರೆಲ್ಲರೂ ಎಷ್ಟೊಂದು ನೊಂದವರು ! ನೀನದನ್ನು ಅರಿಯಲಾರೆ. ನಮ್ಮಲ್ಲೆಷ್ಟೋ ಜನ, ಸ್ವಲ್ಪವಾದರೂ ಅವಕಾಶ ದೊರೆತಿದ್ದರೆ, ಸ್ವಲ್ಪವಾದರೂ ಸಹಾಯ ದೊರೆತಿದ್ದರೆ, ದೊಡ್ಡ ದೊಡ್ಡ ಕಲಾವಿದರಾಗುತಿದ್ದರು ; ಪ್ರತಿಭಾವಂತ ಪ್ರಗತಿಶೀಲ ಸಾಹಿತಿಗಳಾಗುತಿದ್ದರು ; ನಮ್ಮ ದರಿದ್ರ ದೇಶದ ಉನ್ನತಿಗಾಗಿ ಜನರನ್ನು ಜಾಗೃತಗೊಳಿಸಲು ಶಕ್ತಿ ಮೀರಿ ನೆರವು ನೀಡುವವರಾಗುತಿದ್ದರು. "ಆ ಅವಕಾಶ ದೊರೆತಿದ್ದರೆ" ಎನ್ನುವ ಮಾತೆಲ್ಲ ಬರಿಯ ಆಸೆ. ಹೀಗಿದ್ದರೂ, "ಈ ಕಷ್ಟದ ಕತ್ತಲೆಯ ಕಾಲದಲ್ಲೂ ಅರೆಕ್ಷಣ ಬಿಡುವಿದ್ದರೆ ನಮ್ಮ ಹುಟ್ಟು ಗುಣವಾದ ಕಲೆಯ ಮೇಲ್ಮೆಗಾಗಿ ನಾವು ಜೀವ ಸವೆಸುತ್ತೇವೆ," ಎಂದು ಅಂಥ ಜೀವಿಗಳೆಲ್ಲ ಆಗಾಗ್ಗೆ ಹೇಳುವುದನ್ನು ನಾನು ಕೇಳುತ್ತಿರುತ್ತೇನೆ.

ನವರತ್ನ,—ನನ್ನ ಸಹೋದ್ಯೋಗಿ ಆತ. ಈ ಜತೆಗಾರನ ನೆನಪೊಂದು ನನಗೆ ಧೈರ್ಯದ ಆಸರೆ. ತನ್ನ ಬಾಂಧವರ ಹಿತಕ್ಕಾಗಿ ದುಡಿದು, ಅವನು ಅದೆಷ್ಟೋ ಸೊರಗಿದ್ದಾನೆ, ಸಣ್ಣಾಗಿದ್ದಾನೆ. ಹೋರಾಟದ ಚಿಂತನೆಯಲ್ಲಿಯೇ ಅವನು ದಿನ ಕಳೆಯುತ್ತಾನೆ.

ಇನ್ನೊಬ್ಬ ಗೆಳೆಯ ಹರಿನ್. ಆತ ಹೇಳುತ್ತಾನೆ : "ಸಮತಾವಾದ ಪುಸ್ತಕದಲ್ಲಿ ಹುದುಗಿಕೊಂಡಿಲ್ಲ. ದಿನನಿತ್ಯದ ಅನುಭವ, ನಮ್ಮ ಬಡತನ-ಆಸೆ, ಪ್ರತಿಗಾಮಿತ್ವದ ದಬ್ಬಾಳಿಕೆಯನ್ನಿದಿರಿಸುವ ನಮ್ಮ ನೀತಿ,—ಇವುಗಳಿಂದಲೇ, ಮಾರ್ಕ್ಸ್-ಎಂಗೆಲ್ಸರನ್ನು ನಾವು ಕಂಡುಕೊಳ್ಳಬೇಕು. ಅದೇ ನಿಜವಾದ ಸಮತಾವಾದ."

ನಿನ್ನೆ ನಮಗೆಲ್ಲ ಸಂಬಳ ದೊರೆಯಿತು. ಸಂಬಳದ ದಿನವೇ ನಿಧಿ-ವಂತಿಗೆ ಕೊಡುವುದು. ಆ ದಿನ ಹರಿನ್ ಊಟ ಬಿಟ್ಟು, ವಿಶ್ರಾಂತಿಯನ್ನು ಅಪೇಕ್ಷಿಸದೆ, "ನಿಧಿ ಡಬ್ಬಿ"ಯೊಡನೆ ಹೊರಟ. ಆಸ್ಪತ್ರೆಯಲ್ಲಿ ನರಳುತ್ತಿರುವ ರಾಜಕೀಯ ಸಂತ್ರಸ್ತರಿಗಾಗಿ ಸಹಾಯ ಕೂಡಿಸಿದ.

ಇವೆಲ್ಲವನ್ನು ಮನದೆದುರು ತಂದುಕೊಂಡು ನಮ್ಮ ಬಾಳಿನ ಏನೇನೋ ಕತೆ ಬರೆಯಬೇಕೆನಿಸುತ್ತದೆ. ಆದರೆ, ತಾಂಬೂಲ ಸೇವಿಸುವಾಗ ಸುಣ್ಣ

ಹೆಚ್ಚಾಗಿ ಸುಟ್ಟ ನಾಲಿಗೆಯಂತಾದ ನನ್ನ ಮನ, ಬರೆಯಗೊಡುವುದಿಲ್ಲ. ನಮಗಾಗಿ ಬರೆಯುವ ಲೇಖಕರಿಲ್ಲವೇ ? ಅವರು ನಮ್ಮ ಕತೆ ಬರೆಯಲಿ ; ಹಾಳು ಕಲ್ಪನಾ ರಾಜ್ಯದಿಂದ ಹೊರಬಂದು ಬರೆಯಲಿ ;—ಎಂದು ಸುಮ್ಮನಾಗುತ್ತೇನೆ.

ಹೋರಾಟದಲ್ಲಿ ವಿಜಯ ದೊರೆತ ಆ ದಿನದ ವೈಭವ ನನ್ನ ಮನವನ್ನಾವರಿಸುತ್ತದೆ. ಆ ದಿನ ಊರಿಗೆಲ್ಲ ನಮ್ಮ ನಗೆಯನ್ನು ಹಂಚಿಕೊಟ್ಟೆವು. ನಮ್ಮ ಕಥೆ ಹೇಳಿ ಅವರ ವ್ಯಥೆಯ ಹುಟ್ಟಿಗೆ ಅಳಿವು ತಂದೆವು.

ಮನೆ ಮುಟ್ಟಿದೆ. ತಂಗಿ ನನ್ನ ಬರವನ್ನೇ ನಿರೀಕ್ಷಿಸುತ್ತಿದ್ದಳು. ನನ್ನನ್ನು ಕಂಡೊಡನೆ ತಂಗಿಯ ಉತ್ಸಾಹದ ನಗೆ, ಮನೆ ತುಂಬ ತನ್ನ ರಾಜ್ಯ ಕಟ್ಟಿಕೊಂಡಿತು. ನನ್ನ ಮುಖಚರ್ಯೆಯ ಗೆಲುವು ತಂಗಿಯ ಎದೆ ಸೇರಿ, "ಅಣ್ಣಾ ನೀನು ಗೆದ್ದು ಬಂದೆ!" ಎನ್ನಿಸಿತು.

ತಂಗಿಗೆ ಎಂದಿಲ್ಲದ ನಗೆ ಬಂದುದರ ಮೂಲ ಕಾರಣವೇನು ? ಎಂದೆಲ್ಲ ವಿಚಾರಿಸಿದೆ. ವಿಚಾರದ ಸುರುಳಿ ಒಂದು ಉತ್ತರದಲ್ಲಿ ಪರಿಸಮಾಪ್ತಿಯಾಯಿತು.

ನಮ್ಮ ಹೋರಾಟದಲ್ಲಿ ನಾವು ಜಯಶ್ರೀಯನ್ನು ಒಲಿಸಿಕೊಂಡಿದ್ದೆವು.

ಬಹಳ ಹೊತ್ತು ನನಗೆ ಸಮಾಧಾನ ಕೊಡುವ ಉತ್ತರವಾಗಿರಲಿಲ್ಲ ಅದು. "ನನ್ನ ತಂಗಿ, ತಂಗಿಯಂತಹ ಇನ್ನೂ ಸಹಸ್ರ ಹಸುಗೂಸುಗಳು, ಇನ್ನು ದಿನ ದಿನವೂ ಕ್ಷಣ ಕ್ಷಣವೂ ನಗುತ್ತಿರಬೇಕು. ಆ ನಗೆಯ ಗೆಲುವಿಗಾಗಿ ನಮ್ಮ ಕೊನೆಯ ಹೋರಾಟ ಬಿರುಸಾಗಬೇಕು" ಎಂಬ ವಿಚಾರಲಹರಿ ಮತ್ತೆ ಮೈಯುದ್ದಕ್ಕೂ ಹರಿಯತೊಡಗಿತು.

ಕೊನೆಗೆ ನಾನೆಂದೆ :

"ತಂಗೀ ! ನಾನು ಗೆದ್ದು ಬಂದೆ. ನಾವು ಎಲ್ಲವನ್ನೂ ಗೆಲ್ಲುವುದಕ್ಕೆಂದೇ ಜೀವ ತಾಳಿದ್ದೇವೆ. ಕಳೆದುಕೊಳ್ಳುವುದೊಂದೇ ಇದೆ-ಅದು ನಮ್ಮ ಬೇಡಿ. ಇನ್ನೂ ಗೆಲ್ಲಬೇಕು. ಗೆಲ್ಲಲು ಬಹಳವಿದೆ—ಅದು ಈ ವಿಶಾಲ ವಿಶ್ವ !"

ನಮ್ಮ ಓಣಿಯ ಕಿರು ಮನೆಯ ಎಲ್ಲ ಮಕ್ಕಳೂ ಅಂದು ಒಂದಲ್ಲ

ಒಂದು ರೀತಿಯಿಂದ ಉಬ್ಬಿ, ಹೊಸ ದಿನದ ಒಂದು ಹಬ್ಬವನ್ನಾಚರಿಸದಿರಲಿಲ್ಲ! ಆ ದಿನ ಮತ್ತೆ ಟ್ರಾಮುಗಳೆಲ್ಲ ಓಡತೊಡಗಿದುವು. ಕೆಲಸಗಾರರ ಮಕ್ಕಳಿಗೆಲ್ಲ ಮತ್ತೆ ಅಲ್ಲಿ ಸುಳಿದಾಡುವ ಯೋಗ ಒದಗಿತು!

ಅದೇ ಕ್ಷಣ, ಅವ್ಯಕ್ತ ನುಡಿಯೊಂದು, ಎದೆಗುಂದಿಸಿದ ಸೆಳೆತವೊಂದು, ಎರಡೂ ಸೇರಿ ನಿನ್ನನ್ನು ಮತ್ತೆ ನನ್ನ ಮನದೆದುರು ಹಿಡಿದು ತಂದುವು........

........ಚಳಿಗಾಲದ ನವಂಬರದ ಆ ದಿನದ ಮುಂಜಾವು, ಮೊದಲ ವರ್ಗದ ಕಂಪಾರ್ಟ್‌ಮೆಂಟಿನಲ್ಲಿ ನಾನು ಕೆಲಸ ಮಾಡುತಿದ್ದ ಟ್ರಾಮಿನಲ್ಲಿಯೇ, ಕುಳಿತ ನೀನು!........ಮತ್ತು ನಿಂತ ನಾನು!

ನೀನು ಸುಶಿಕ್ಷಿತೆ. ನಾಗರಿಕತೆಯ ಹೊಸ ಬಗೆಯ ಆಭರಣ ಧರಿಸಿದ ಶ್ರೀಮಂತ ನವತರುಣಿ. ನಿನ್ನೆದುರಿಗಿದ್ದ ನಾನು ಬಡವ........ಮತ್ತೆ ನನ್ನ ತಂಗಿಯ ನೆನಪು. ಸಂದಿಯೊಂದರಲ್ಲಿಯಾದರೂ, ಇದ್ದುದರಲ್ಲಿಯೇ ನಕ್ಕು, ಹೊಸ ಬಾಳಿಗಾಗಿ ತವಕಿಸುವ, ನನ್ನ ಒಲವಿನ ನಾಡಿನ ಸಂಸ್ಕೃತಿಯ ಗುಡಿಯ ಹೊಂಗಳಸವಾದ—ನನ್ನ ತಂಗಿ! ಆ ತಂಗಿ ನನ್ನನ್ನು ಸ್ವಾಗತಿಸುತ್ತಿದ್ದಾಳೆ—ವಿಜಯಿಯಾಗಿ ನಾನು ಮನೆಯೊಳಗೆ ಅಡಿ ಇಡುವಾಗ! ಆದರೆ ನೀನು? ಆ ವಿಜಯವನ್ನೇ ಅಧೋಗತಿಯೆಂದು ತಪ್ಪು ಭಾವಿಸಿ ನನಗೆ ಶಾಪ ಕೊಟ್ಟೆಯಲ್ಲವೆ? ಎಷ್ಟು ಅಂತರ!

ನಮ್ಮ ಓಣಿಯಲ್ಲೆಲ್ಲ ಅಂದು ಒಸಗೆ ಉತ್ಸಾಹ. ನಿನ್ನ ಸಡಗರದ ಮನೆಯನ್ನು ಅಂದು ಕತ್ತಲು ಅಪ್ಪಿಕೊಂಡಿತ್ತೇ?

ನಾವೆಲ್ಲ ಮುಷ್ಕರ ಹೂಡಿದಾಗ, ನಾನು ದಿನವಿಡೀ ನಿಧಿ ಸಂಗ್ರಹಕ್ಕಾಗಿ ತಿರುಗುತಿದ್ದೆ. ಕಲ್ಕತ್ತೆಯ ಒಂದು ತುಣುಕು ದಾರಿಯನ್ನೂ ನಾನು ಸುತ್ತದೆ ಇರಲಿಲ್ಲ. ನಿಮ್ಮ ಓಣಿಯಲ್ಲಿ, ನಿನ್ನಂಥ ಮಧ್ಯಮ ವರ್ಗದ ಹೆಣ್ಣು ಮಗಳೊಬ್ಬಳು ದಿನವೂ ನನ್ನ "ನಿಧಿ ಡಬ್ಬ"ಕ್ಕೆ ಹಣ ಹಾಕಿ ಹೋಗುತಿದ್ದಳು. ಆಕೆ ಮಾತ್ರ ನಿನ್ನಂಥ ತಿರಸ್ಕಾರದ ನೋಟ-ಭಾವನೆಯವಳಾಗಿರಲಿಲ್ಲ. ನಮ್ಮ ಹೋರಾಟದ ಬಗ್ಗೆ ಆದರವಿತ್ತು ಆಕೆಗೆ.

ನೀನು ಮಾತ್ರ ನನ್ನನ್ನು ಆ ದಿನ ನೋಡಿ ತಿರಸ್ಕಾರ ಪಟ್ಟೆ. ನಾವು ಕೈಕೊಂಡ ಕಾರ್ಯದ ನಿಜ ಸ್ವರೂಪವನ್ನು ಅರಿಯದಷ್ಟೂ ನಿನ್ನ ಕಣ್ಣುಗಳು

ಕುರುಡಾಗಿದ್ದುವು. ಆ ೮,೦೦೦ ಹಿಂದೂ ಮುಸಲ್ಮಾನರ ಐಕ್ಯ ಸಾಧಿಸಿ, ಏಕಮುಖವಾಗಿ ನಡೆಸಿದ ನಮ್ಮ ಹೋರಾಟದ ವಿಸ್ತಾರ, ನಿನ್ನನ್ನು-ನಿನ್ನ ಕಲ್ಲೆದೆಯನ್ನು-ಕರಗಿಸಲಿಲ್ಲವೆ? ನನಗಾಗ ಮಿತಿಯಿಲ್ಲದ ವೇದನೆಯಾಯಿತು. ನನ್ನನ್ನು ನಾನೇ ನಂಬದಾದೆ. ನಮ್ಮ ಹಿಂದಿನ ಸಂಬಂಧ ಹೀಗಾಯಿತೇ ಎಂದುಕೊಂಡೆ.

ಟ್ರಾಮ್ ಕಂಡಕ್ಟರನಾದ ಮೊದಲ ಕೆಲವು ದಿನ ನಾನು ಬಹಳ ಅಪಮಾನ ಸಹಿಸಿದೆ. ಕೆಲಸ ಬಿಟ್ಟು ದೂರ ಓಡಿಹೋಗಬೇಕೆನಿಸಿತು. ಆದರೆ ಹಾಗೆ ಮಾಡದೆ "ನಾನು ಜೀವನದಲ್ಲಿ ನಗೆ ಕಾಣುವುದು ಇದೇ ಕೆಲಸದಲ್ಲಿ, ಬೇರೆ ಕಡೆಯಲ್ಲಲ್ಲ," ಎಂದು ನಿರ್ಧಾರಕ್ಕೆ ಬಂದೆ. ನೀನು "ಒಳಿತಾಯಿತು" ಎನ್ನುವೆ ಎಂದು ಕಾದಿದ್ದೆ.

ದೂರ ದೂರ ಸಿಡಿದ ಜಾತಿ ಮತಗಳ ಐಕ್ಯ ಸಂಪಾದನೆಗೆ, ನಮ್ಮ ಹೊಸ ಬಗೆಯ ಹುಟ್ಟಿಗೆ, ನಾವು ಟೊಂಕ ಕಟ್ಟಿ ನಿಂತು ರಣ ಕಹಳೆಯನ್ನು ಊದುತ್ತಿರುವಾಗ, ಪರದೇಶಗಳ ಪ್ರವಾಸಿಕರೂ ನಮ್ಮ ಮೇಲೆ ಸಹಾನುಭೂತಿ ತೋರಿಸುತ್ತಾರೆ. ದೇಶದ ಮುಖಂಡರೆಲ್ಲ, "ಸ್ವಾತಂತ್ರ್ಯ ಸಾಧನೆಯಲ್ಲಿ ನಿಮ್ಮ ಸ್ಥಾನ ದೊಡ್ಡದು, ನಿಮ್ಮನ್ನು ನಾವು ಗಮನಿಸದೆ ಇರಲಾರೆವು" ಎನ್ನುತ್ತಾರೆ.

........ನಾವು ಕೇವಲ ಟ್ರಾಮ್ ಕೆಲಸಗಾರರಲ್ಲ. ನಾಡಿನ ವೀರಯೋಧರು. ಇದನ್ನು ನೀನು ಮನಗಾಣು.

ಬಡವರಾದ ನಾವು ಮತ್ತು ನಿಮ್ಮ ಧನಿಕ ಕುಲ ನಿಂತ ನೆಲವೊಂದೇ ಒಂದು! ನಿಮ್ಮ ಈ ಬಗೆಯ ಅಂಥ ದುರಭಿಪ್ರಾಯದ ಹೊಲಸು ನೀರಿನ ಹೊಳೆ, ನಮ್ಮ ಸುಂದರ ನೆಲವನ್ನು, ನಮ್ಮ ಹಿರಿಮೆಯ ಸಂಸ್ಕೃತಿಯನ್ನು, ನಮ್ಮಂತಹ ಕಾರ್ಮಿಕರ ಎದೆಗಳನ್ನು, ಇಬ್ಭಾಗಿಸದಿರಲಿ! ಆ ಹೊಲಸು ನೀರಿನ ಕೊರಕಲು ಹೊಳೆಯಲ್ಲಿ ನೀವು ಕಾಣುವುದೇನು? ಕಲಂಕಿತ ನೀರನ್ನಷ್ಟೇ ಅಲ್ಲವೆ?

ಪ್ರಿಯೆ—, ನನ್ನ ಕೊನೆಯ ಪ್ರಶ್ನೆಯಿದು :

"ಇನ್ನೊಮ್ಮೆ ಅಪ್ಪಿತಪ್ಪಿ ನನ್ನನ್ನು ನೋಡಿದರೆ, ಹಿಂದಿನ ಸಲದಂತೆ ಮುಖ ಮುದುಡಿಸುವೆಯಾ?"

ನೀನು ಹಾಗೆ ಮಾಡಲಾರೆ; ನಿಮ್ಮ ಶ್ರೇಣಿಯವಳೇ ಆದ, ಮಧ್ಯಮ ವರ್ಗದವಳಾದ, ನಮ್ಮ ನೆರವಿಗೆಂದು "ನಿಧಿ ಡಬ್ಬಿ"ಗೆ ಹಣಕಾಸು ನೀಡಿದ, ತಿಳಿವಳಿಕೆಯ ಆ ಇನ್ನೊಬ್ಬ ಸೋದರಿಯನ್ನು ನೀನು ಅನುಸರಿಸುವೆ ; ಎಂಬ ಆಸೆಯಿದೆ ನನಗೆ.

ಎಂದು
ಧನಂಜಯ ಘೋಷ್

---

೧೦ ಆಗಸ್ಟ್ ೧೯೪೭

# ಮಣ್ಣಿನ ಮಕ್ಕಳು

"ಹಿಡಿ ಸಿವುಡೋ ಕುಡಗೋಲೋ
ಮುಕ ಬಾಡ್ಯೋ ಮೈ ಬಾಡ್ಯೋ
ಜಡನಾದ್ಯೊ ಮೈಯೊ
ಹಾರಿ ಜಡದಂಗೊ...........ಹೋ!"

ಮಲ್ಲಪ್ಪನ ಹಂತಿಯ ಹಾಡು ಸುತ್ತು ಮುತ್ತಲಿನ ಹೊಲದಲ್ಲಿದ್ದವರಿಗೂ ಕೇಳಿಬರುತಿತ್ತು. ಮೇಟಿಯ ಸುತ್ತಲೂ ದನಗಳು ತಿರುಗಾಡಿದಂತೆ ಅವುಗಳ ಕಾಲ್ತುಳಿತಕ್ಕೆ ತೆನೆಗಳು ಕಂಕಿಯಾಗುತಿದ್ದುವು.

"ಅವ್ವ ಬುತ್ತಿ ತಂದಾಳ ; ಉಣ್ಣಾನು ಬಾ ಆಪ್ಪಾ"

—ಎಂದು, ಕಣದ ಬಳಿಯಲ್ಲಿಯೇ ಇದ್ದ ಗುಡಿಸಲ ಮುಂದೆ ಉರಿ ಕಾಸುತ್ತ ಕುಳಿತ ಶಿವು ತಂದೆಯನ್ನು ಊಟಕ್ಕೆ ಕರೆದ.

"ನಾನಷ್ಟು ಹಂತಿ ತಿರುವತೀನಿ ; ನೀವು ಉಣ ಬರ್ರಿ"

—ಎಂದು, ಮಲ್ಲಪ್ಪನ ಹೆಂಡತಿ ಪಾರ್ವತಿ ದನಿಗೂಡಿಸಿದಳು.

ತಲೆಯ ಮೇಲಿನ ರುಮಾಲನ್ನು ಜಾಡಿಸಿ, ಬಿಂದಿಗೆಯಲ್ಲಿದ್ದ ನೀರಿನಿಂದ ಕೈ ತೊಳೆದು ಬಾಯಿ ಮುಕ್ಕಳಿಸಿ, ಮಲ್ಲಪ್ಪ ಊಟಕ್ಕನುವಾದ. ರೊಟ್ಟಿ, ಖಾರ, ಮೊಸರು, ಉಳ್ಳೀಗಡ್ಡಿ—ಇಷ್ಟೇ ಊಟದ ಸಾಮುಗ್ರಿಯಾಗಿತ್ತು.

ಚಳಿಗಾಳಿ ಬೀಸುತಿತ್ತು. ಗಾಳಿಗೆ ಹೊಲದಲ್ಲಿಯ ರವದೆ ಸಪ್ಪಳ ಮಾಡಿತು. ಆ ಸರಬರ ಸದ್ದು ಕೇಳಿ ಕಣದಲ್ಲಿಯೇ ಮಲಗಿದ್ದ "ಚಂಪಿ" ಸದ್ದಾದ ದಿಕ್ಕಿನ ಕಡೆಗೆ ತೂರಿ ಹೋಗಿ ಬೊಗಳ ಹತ್ತಿತು........

XXX XXX XXX

ಆಗ ನಡುರಾತ್ರಿಯಾಗಿರಬೇಕು. ಎಲ್ಲೆಡೆಗೂ ಶಾಂತ ವಾತಾವರಣ. ಹಾಲು ಚೆಲ್ಲಿದಂತೆ ಬೆಳದಿಂಗಳು. ಆಕಾಶ ಶುಭ್ರವಾಗಿತ್ತು. ಸುಗ್ಗಿಯ

ಕಾಲದ ರಮಣೀಯತೆಗೆ ಬೆಳದಿಂಗಳು ಒಪ್ಪ ಹಾಕಿತ್ತು. ದನಕರುಗಳ ಕೊರಳೊಳಗಿನ ಗಂಟೆಗಳ ಟಂಟಣಿ ನಾದ ಸುಗ್ಗಿಯ ಸಂಭ್ರಮವನ್ನು ಸಾರಿ ಹೇಳುತಿತ್ತು. ರೈತರಿಗೆ ವರ್ಷಕ್ಕೊಮ್ಮೆ ಬರುವ ಪರ್ವಕಾಲ ಇದು. ಅವರ ದುಡಿತವೆಲ್ಲ ಹಣ್ಣಾಗಿ ನಿಂತಿರುವ ಕಾಲ !

"ಅಪ್ಪಾ, ನಾ ಸಾಲಿಗೆ ಹೋಗೂದಿಲ್ಲ ; ಮಾಸ್ತರು ಹೊಡೀತಾರ"

—ಎಂದು, ಗುಡಿಸಲಿನ ಮೂಲೆಯೊಂದರಲ್ಲಿ ಕಂಬಳಿ ಹೊದೆದು ಮಲಗಿದ್ದ ಶಿವು ಕನವರಿಸುತಿದ್ದ. ಚಿಲುಮೆ ಸೇದುತಿದ್ದ ಮಲ್ಲಪ್ಪ ಪಾರ್ವತಿಯ ಕಡೆಗೆ ಹೊರಳಿ ನೋಡಿದ. ಅವಳೇ ಮಾತಿಗೆ ಮೊದಲು ಮಾಡಿದಳು.

"ಅಲ್ರೀ ನಾಳೆ ರಾಶಿ ಆದ ಮ್ಯಾಲೆ ಸರಕಾರದೋರು ಕಾಳು ಒಯ್ಯಾಕ ಬರತಾರಂತ. ಮೊನ್ನೆ ನೋಡಿದ್ರಿಲ್ಲೊ ? ಬಸಪ್ಪ, ರಾಶಿ ಮನೆಗೆ ಒಯ್ಯು ಮುಂದ ಪೋಲೀಸರು ದಾರ್‍ಯಾಗ ಚಕ್ಕಡಿ ತುರುಬಿ ಜ್ವಾಳಾ ಓದರು" ಎಂದು ವಿಸ್ಮಿತವದನದಿಂದ ಹೇಳಿದಳು ಪಾರ್ವತಿ.

"ಹೌದು, ನಾನೂ ಅದನ್ನ ವಿಚಾರ ಮಾಡಾಕ ಹತ್ತಿದ್ದೆ. ಈ ವರ್ಷ ಮಳೀನೂ ಕಾಲಕ್ಕ ಸರಿಯಾಗಿ ಆಗೇತಿ. ಬೆಳೀನೂ ಹುಲುಸಾಗಿ ಆಗೇತಿ. ಏನಿಲ್ಲಂದರೂ ಮೂರು ಹೇರು ಜ್ವಾಳಾ ಆದಾವು. ಮುಂದಿನ ಸುಗ್ಗಿ ತನಕ ನಮ್ಮ ಹೊಟ್ಟೆಗೇನೂ ಬಾಧಾ ಇಲ್ಲ. ಆದರ ಈ ಕೆಂಪು ಮೋತಿಯವರದಾರಲ್ಲ. ದಿನಾ ಒಂದು ಕಾಯಿದೆ ಮಾಡತಾರ. ಬೆಳೆದ ಕಾಳು ಅವರು ದೋಚಿಕೊಂಡು ಹೋದರ ನಾವೇನು ಹೊಟ್ಟೆಗೆ ಕೇರು ಹಾಕ್ಯೊಬೇಕ ?" ಎಂದು ಸ್ವಲ್ಪ ಗಡುಸಾಗಿಯೇ ಮಲ್ಲಪ್ಪ ನುಡಿದ-

"ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲಾಂತ ವರ್ಷಾನಗಟ್ಲೆ ಮೈಮುರೇ ದುಡದ್ರು ನಮ್ಮ ಕಾಳು ನಮಗೆ ದಕ್ಕದಿರೋದು ಎಲ್ಲಿ ನ್ಯಾಯ ? ರೈತರಿಗೆ ವರ್ಷಾ ಏನಾರ ಒಂದು ಕಾಟ ಇದ್ದೇ ಇರತ್ತೈತಿ. ಎಲ್ಲಾ ಶಿವನ್ನೇ ಕೂಡೇತಿ," ಎಂದು ಪಾರ್ವತಿ ನಿಟ್ಟುಸಿರಿಟ್ಟಳು.

ಗಾಳಿ ಬೀಸಿತು. ಗುಡಿಸಲಿನ ಕಿಂಡಿಗಳಿಂದ ಗಾಳಿ ಒಳನುಗ್ಗಿತು. ಆ ಚಳಿಗಾಳಿಗೆ ಶಿವು ಅತ್ತ ಇತ್ತ ಹೊರಳುತ್ತ ಕುಸಗುಡ ಹತ್ತಿದ. ಪಾರ್ವತಿ ಅವನ ಮಗ್ಗುಲಲ್ಲಿಯೇ ಮಲಗಿ ಚಪ್ಪಿ ಒಡೆಯಹತ್ತಿದಳು.

ಮಲ್ಲಪ್ಪನಿಗೆ ಬೇಗ ನಿದ್ದೆ ಬರಲಿಲ್ಲ. ಅವನ ತಲೆ ತುಂಬ ಯೋಚನೆ. ತಾನೂ ಹೆಂಡತಿಯೂ ಇಡೀ ವರ್ಷ ಚಳಿ ಮಳೆ ಎನ್ನದೆ ಹೊಲದಲ್ಲಿ ದುಡಿದುದಾಯಿತು. ಅದರ ಫಲವಾಗಿ ಕಣದಲ್ಲಿ ಮೂರು ಹೇರಿನ ಜೋಳದ ರಾಶಿ ಬಿದ್ದಿತ್ತು. ಈ ವರ್ಷ ಒಂದು ಹೊಸ ಎತ್ತು ಕೊಳ್ಳಬೇಕು. ಆರು ಎಕರೆ ಹೊಲ, ಗುಬ್ಬಿಯ ಗೂಡಿನಂಥ ಮನೆ, ಆ ಎತ್ತು,—ಇಷ್ಟೇ ಅವನ ಸಂಪತ್ತು. ಮಗು ಶಿವನನ್ನು ಶಾಲೆಗೆ ಹಾಕಬೇಕು. ಪಾಟಿ [ಸ್ಲೇಟು]-ಪುಸ್ತಕ ಕೊಡಿಸಬೇಕು. ಹೊಸ ಅಂಗಿ ಹೊಲಿಸಬೇಕು. ಪಾರ್ವತಿಗೂ ಸೀರೆ ಕೊಳ್ಳಬೇಕು. ಶಿರಹಟ್ಟಿ ಜಾತ್ರೆಗೆ ಹೋಗದೆ ಐದಾರು ವರ್ಷಗಳಾದುವು. ಈ ವರ್ಷ ಹೋಗಿ ತೇರಿಗೆ ಹಣ್ಣು ಕಾಯಿ ಒಗೆದು ಬರಬೇಕು........

"ಬೊವ್ ಬೊವ್"

ಬದಿಯ ಹೊಲದಲ್ಲಿಯ ನಾಯಿಯ ಬೊಗಳುವಿಕೆಗೆ ಚಂಪಿಯೂ ಉತ್ತರ ಕೊಟ್ಟಿತು.

ಮಲ್ಲಪ್ಪನ ಕಣ್ಣುಗಳು ತಾವಾಗಿಯೇ ಮುಚ್ಚಿಕೊಂಡುವು. ಹಣ್ಣುಹಣ್ಣಾದ ದೇಹಕ್ಕೆ ನಿದ್ರೆಯ ಆಸರೆ ಇರದಿದ್ದರೆ ಮನುಷ್ಯನ ಬಳಲಿಕೆಗೆ ಮಿತಿ ಇರುತ್ತಿರಲಿಲ್ಲ. ಬಾಳಿನ ಅನಂತ ಬವಣೆಗಳಿಗೆಲ್ಲ ಒಂದು ಕ್ಷಣ ನಿದ್ರೆ ಮುಸುಕು ಹಾಕಿತು.

xxx xxx xxx

ಆಗುವುದೆಲ್ಲ ಆಗಿಹೋಗಿತ್ತು.

ಒಂದು ತಿಂಗಳಿಗೂ ಆಗದಷ್ಟು ಕಾಳನ್ನು ಬಿಟ್ಟು ಉಳಿದಷ್ಟನ್ನೂ ಪೋಲೀಸರು ಒಯ್ದುಬಿಟ್ಟಿದ್ದರು. ಮಲ್ಲಪ್ಪನೂ ಪಾರ್ವತಿಯೂ ಅಂಗಲಾಚಿ ಬೇಡಿಕೊಂಡರು. ಸಾಧ್ಯವಾಗಲಿಲ್ಲ. ಮಲ್ಲಪ್ಪನ ಮೈಯೆಲ್ಲ ಉರಿಯತೊಡಗಿತು. ಆದರೆ ಆಗ ಅವನು ಸರ್ಕಸಿನೊಳಗಿನ ಸಿಂಹವಾಗಿದ್ದ. ಅವನು ಬಯಸಿದ್ದೆಲ್ಲಾ ಮಣ್ಣುಗೂಡಿತು ; ಹೊಟ್ಟೆಗೆ ಕಲ್ಲು ಬಿತ್ತು.

ಮಲ್ಲಪ್ಪ ತನ್ನ ರಟ್ಟೆ ಮುಟ್ಟಿ ನೋಡಿಕೊಂಡ. ಅವು ಇನ್ನೂ ಬಲಿಷ್ಟವಾಗಿದ್ದುವು. ಎದೆ ಉಕ್ಕಿನಂತೆ ಬಿರುಸಾಗಿತ್ತು. "ದೇಹ ಮಣ್ಣಿನಲ್ಲಿ ಅಡಗುವವರೆಗೂ ಗೆಯ್ಮೆ ತಪ್ಪಿದ್ದಲ್ಲ. ನಾನು ಅಷ್ಟು ದುಡಿಯಲಾರೆನೇ ?" ಎಂದು

ಕೊಂಡ ತನ್ನಷ್ಟಕ್ಕೆ. ಆದರೆ ಹೆಂಡತಿಯನ್ನು ನೋಡಿದೊಡನೆ ಇನ್ನಿಲ್ಲದ ಕನಿಕರ ಬಂದುಬಿಡುತಿತ್ತು. ತನ್ನ ಮನೆಯ ಭಾಗ್ಯದ ಲಕ್ಷ್ಮಿ ಬಡವಾಗಿದ್ದಾಳೆ. ಮರ್ಯಾದೆ ಮುಚ್ಚುವ ಸೀರೆ ಹರಕಾಪರಕು. ತೊಟ್ಟ ಕುಪ್ಪಸ ಛಿನ್ನಾಛಿದ್ರ! ಕೈಮೈಯ ಎಲುಬು ಹೊರಗೆ ಕಾಣುತ್ತಿದೆ. ಕಿವಿಯಲ್ಲಿ ಬರಿಯ 'ಹೆಜ್ಜೆ'ಗಳಿವೆ. ಎಂದೋ ಒಮ್ಮೆ ಬೆಂಡೋಲೆಗಳು ಅವಳನ್ನು ಅಲಂಕರಿಸಿದ್ದುವು. ತೋಪಿನ ಸೆರಗಿನ ಸೀರೆಯುಟ್ಟು, ರಬಕವಿಯ ಕಣ ತೊಟ್ಟು, ತಲೆ ಬಾಚಿಕೊಂಡು, ಹಣೆಗೆ ಕುಂಕುಮವಿಟ್ಟು, ಕುಲು ಕುಲು ನಗುತಿದ್ದ ಪಾರ್ವತಿಯ ಹಿಂದಿನ ಚಿತ್ರ ಮಲ್ಲಪ್ಪನ ಕಣ್ಣ ಮುಂದೆ ಬಾರದಿರಲಿಲ್ಲ. ಇಂದಿನ ಅವಳ ರೂಪ ಅವನನ್ನು ದಂಗುಬಡಿಸಿತು. ಎದೆ ದಡದಡಿಸಿತು. ಕಣ್ಣೀರು ತುಳುಕಿ ತುಳುಕಿ ಬಂದುವು.

ಹೊಸತಿಲ ಮೇಲೆ ಕುಳಿತ ಶಿವು ರೊಟ್ಟಿಯ ತುಂಡನ್ನು ಕಡಿಯುತಿದ್ದ. ಚಂಪಿ ಬಾಲ ಅಲ್ಲಾಡಿಸುತ್ತ ಮಲಗಿಕೊಂಡು ಮಗುವಿನತ್ತ ಕೃತಜ್ಞತೆಯಿಂದ ನೋಡುತಿತ್ತು. ಹಟ್ಟಿಯಲ್ಲಿ ಎತ್ತು ರವದೆ ಇಲ್ಲದ ಒಣ ದಂಟನ್ನೆ ಮೆಲುಕಾಡಿಸುತಿತ್ತು. ಆ ಬಡಕಲಾದ ಮೈಯಿಂದಲೂ ರಕ್ತ ಹೀರಬೇಕೆಂದು ನೊಣಗಳು "ಜೊಮ್" ಎಂದು ಮುತ್ತುತ್ತಿದ್ದುವು. ಬಾಲವೆತ್ತಿ ಜಾಡಿಸಿಕೊಳ್ಳದಷ್ಟು ಬೇಸರವಾಗಿತ್ತು ಎತ್ತಿಗೆ........

........ಇತ್ತಿತ್ತ ಪಾರ್ವತಿಗೆ ಮೈಯಲ್ಲಿ ನೆಟ್ಟಗಿರಲಿಲ್ಲ. ಪೋಲೀಸರು ಬಂದು ಬೆದರಿಸಿ, ಆಡಬಾರದ್ದಾಡಿ ಕಾಳು ಒಯ್ದುದ್ದೇ ನೆಪವಾಗಿ ಆಕೆ ನೆಲವನ್ನೆ ಹಿಡಿದಳು. ದಿನ ಬಿಟ್ಟು ದಿನ ಜ್ವರ ಬರತೊಡಗಿತು. ಔಷಧಿಯ ಮಾತನ್ನು ಯಾರೂ ಎತ್ತುತ್ತಿರಲಿಲ್ಲ. ಸಿಗುವ ಭರವಸೆಯೂ ಇರಲಿಲ್ಲ. ಜಡ್ಡು, ಬಂದಾಗ ಬಂದು ಹೋಗುವ ಕಾಲಕ್ಕೆ ಹೋಗಬೇಕು, ಅವಳ ಪಾಲಿಗೆ.

ಶಿವು, ತಾಯಿಯ ಬತ್ತಿ ಹೋದ ಮೊಲೆಯನ್ನೆ ಗೀರಿ ಗೀರಿ ಕುಡಿಯುತಿದ್ದ. ಪಾರ್ವತಿಗೆ ನೋವಾಗುತ್ತಿರಬೇಕು. ಆದರೆ ಅವಳು ಆರು ವರ್ಷಗಳ ಹಿಂದಿನ ನೆನಪಿನ ಸುರಳಿಯನ್ನು ಬಿಚ್ಚತೊಡಗಿದ್ದಳು. ಸೋಮು ಇಲ್ಲಿಯವರೆಗೆ ಬದುಕಿದ್ದರೆ ಹದಿನಾರರ ಹರೆಯದ ಹುಡುಗನಾಗುತ್ತಿದ್ದ. ಮನೆಗೆ ದುಡಿದು ತಂದು ಹಾಕುತಿದ್ದ. ತಾಯಿ-ತಂದೆ-ತಮ್ಮಂದಿರ ಹೊಟ್ಟೆ ಬಟ್ಟೆ ನೋಡು

ತಿದ್ದ. ಎಷ್ಟು ಶಕ್ತಿವಂತನಾಗಿದ್ದನವ! ಗೌಡರ ಮನೆಯಲ್ಲಿ ಹದಿನಾರೆತ್ತಿನ ಗೋದಲಿ, ಕಾಳಿನ ಕಣಜ, ತಿಜೋರಿಗಳನ್ನು ನೋಡಿ ಬಂದು, ತಮ್ಮ ಮನೆಯಲ್ಲಿ ಅವು ಏಕೆ ಇಲ್ಲ? ಎಂದು ತಾಯಿಯನ್ನು ಕೇಳುತಿದ್ದ. ಅಡುಗೆ ಮನೆ, ನಡು ಮನೆ, ಹಟ್ಟಿ—ಎಲ್ಲವೂ ನಾಲ್ಕು ಅಂಕಣದಲ್ಲಿಯೇ ಇದ್ದ ತಮ್ಮ ಮನೆಯಲ್ಲಿ, ತಾಯಿ ಪೆಟ್ಟಿಗೆಯಲ್ಲಿ ರೊಕ್ಕ ಇಡದೆ ಕಂಬದ ಬೋದಿನಲ್ಲಿ ಇಡುತಿದ್ದುದನ್ನು ಕಂಡಿದ್ದ. ಗೌಡರ ಮನೆ—ತಮ್ಮ ಮನೆಗಳಲ್ಲಿಯ ವ್ಯತ್ಯಾಸವನ್ನು ಕಂಡ ಸೋಮು ತಾಯಿಗೆ ಹೇಳುತಿದ್ದ:

"ಅವ್ವಾ ನಾನು ದೊಡ್ಡವನಾದ ಮೇಲೆ ಇವರಪ್ಪನಂಥ ಮನೆ ಕಟ್ಟತೇನಿ. ನೀನೂ ಅಪ್ಪ ಏನೂ ಕೆಲಸ ಮಾಡಬೇಡ್ರಿ. ನಾನೆಲ್ಲ ನಿಮುಗ ದುಡಿದು ತಂದು ಹಾಕತೇನಿ. ನನ್ನ ಲಗು ಲಗು ದೊಡ್ಡವನನ್ನು ಮಾಡು........"

.......ಪಾರ್ವತಿ ಬುದುಂಗನೆ ಎದ್ದು ಕುಳಿತಳು. "ಅಯ್ಯೊ, ನನ್ನ ಬಂಗಾರಾನ ಮಣ್ಣಾಗಿಟ್ಟು ನಾನ್ಯಾಕಿರಬೇಕು? ಸೋಮು!" ಎಂದು ಕೂಗಾಡಿದಳು. ಕೂತಿರಲು ಶಕ್ತಿ ಸಾಲಲಿಲ್ಲ. ಹಾಗೆಯೇ ಚಾಪೆಯ ಮೇಲೊರಗಿದಳು.

"ಹಿಂಗ್ಯಾಕ ಸನ್ನಿ ಬಡದ್ಹಾಂಗ ಮಾಡತೀ ಪಾರು?" ಎಂದು ಹೇಳಿ ಮಲ್ಲಪ್ಪ ಅವಳ ಬಳಿ ಕುಳಿತ.

"ಸೋಮು" ಎಂದು ನುಡಿದ ಅವಳ ನಾಲಿಗೆ ಮತ್ತೆ ಏಳಲಿಲ್ಲ. ಅಂಥ ಹೊತ್ತಿನಲ್ಲಿಯೂ ಅವಳ ಕಣ್ಣಿನಲ್ಲಿ ಯಾವದೋ ಕಾಂತಿಯನ್ನು ಕಂಡ ಮಲ್ಲಪ್ಪ.

ಪತಿಯನ್ನು ಬಿಟ್ಟು ಬಿಡದೆ ನೋಡುತಿದ್ದ ಅವಳ ಕಣ್ಣುಗಳು ಹಾಗೆಯೇ ಮುಚ್ಚಿಕೊಂಡುವು. ಮತ್ತೆ ತೆರೆಯಲಿಲ್ಲ.

ಮಲ್ಲಪ್ಪ ಪಾರ್ವತಿಗೆ ಮಣ್ಣು ಕೊಟ್ಟು, ಮಗ ಶಿವನೊಡನೆ ಮರಳಬೇಕಾದರೆ, ಮಧ್ಯರಾತ್ರಿಯಾಯಿತು. ಆಗಸದಲ್ಲಿ ಚಕ ಚಕಿಸುತಿದ್ದ ಚುಕ್ಕೆಗಳು ಮೋಡಗಳ ಮರೆಯಲ್ಲಿ ಅಡಗಿದುವು. ಕತ್ತಲು ಕಗ್ಗತ್ತಲಾಯಿತು. ಮಲ್ಲಪ್ಪ ಮಸಣದ ಕಡೆಗೆ ಹೊರಳಿ ಹೊರಳಿ ನೋಡುತ್ತ, ಹೆಜ್ಜೆ ಇಟ್ಟೂ ಇಡಲಾರದೆ ನಡೆದಿದ್ದ. ಗಿಡಗಂಟೆಗಳಲ್ಲಿಯ ಕ್ರಿಮಿ ಕೀಟಗಳು ಜಿರ್-ಜಿರ್ರೆಂದು ಮೃತ್ಯು ಗೀತ ಹಾಡುತ್ತಿದ್ದುವು.

ಚಂಪಿ ಮಲ್ಲಪ್ಪನನ್ನು ಹಿಂಬಾಲಿಸಲಿಲ್ಲ. ಅದು ಪಾರ್ವತಿಯನ್ನು ಹುಗಿದ ಸ್ಥಳದಲ್ಲಿಯೇ ನಿಂತು ಗೋಗರೆಯುತಿತ್ತು.

---

೧೩ ಜುಲೈ ೧೯೪೭

# ಇಬ್ಬರು ಗುಂಡರು

ನೇಮುನಾಯಕರನ್ನು ಕೈದು ಮಾಡಿದರೆಂಬ ಸುದ್ದಿ ಕಾಡುಕಿಚ್ಚಿನಂತೆ ಹಳ್ಳಿಹಳ್ಳಿಗೂ ಹಬ್ಬಿತು. ಜತೆಯಲ್ಲೆ ಆಲೀಖಾನರನ್ನು ಗಿರಫ್ತಾರ್ ಮಾಡಿದರೆಂಬ ವಾರ್ತೆ ಭುಗಿಲ್‌ಭುಗಿಲೆನ್ನುತ್ತ ವಾತಾವರಣವನ್ನೆಲ್ಲ ತುಂಬಿಕೊಂಡಿತು. ಅಂಗಳದಲ್ಲಿ ಆಡುತಿದ್ದ ಪೋರ, ಎಲೆ ಅಡಿಕೆ ಮೆಲುಕುಹಾಕುತಿದ್ದ ಅಜ್ಜ, ಹೊಲದಲ್ಲಿ ದುಡಿದು ಬಂದ ಗಂಡಹೆಂಡಿರು, ಸಂಘದ ಯುವಕ ಕಾರ್ಯಕರ್ತರು—ಎಲ್ಲರೂ ಆಡುತಿದ್ದ ಸೊಲ್ಲು ಒಂದೇ :

"ಯಾಕೆ ? ಯಾಕೆ ? ಕೈದು ಯಾಕೆ? ಗಿರಫ್ತಾರ್ ಯಾಕೆ ?"

ಯಾಕೆ ಎಂದು ಯಾರಿಗೆ ಗೊತ್ತು ? ಯಾರನ್ನು ಕೇಳಬೇಕು ?

ಎಪ್ಪತ್ತು ವರ್ಷದ ಮುದಿ ಮುದುಕ, ಆಲೀಖಾನ್. ಅರವತ್ತು ವರ್ಷದ ವೃದ್ಧ, ನಾಯಕ. ಇಬ್ಬರನ್ನೂ ಅರ್ಧ ದಾರಿ ನಡೆಸಿ, ಉಳಿದರ್ಧ ದಾರಿ ಲಾರಿಯಲ್ಲಿ ಹಾಕಿ ಮುಟ್ಟೂರಿಗೆ ಸಾಗಿಸಿದರಂತೆ. ಪೋಲೀಸ್ ಅಧಿಕಾರಿ ಆಲೀಖಾನರ ಬಡಕಲು ಕೈಗಳನ್ನು ಸಂಕೋಲೆಯಿಂದ ಬಿಗಿದಾಗ ಆ ಮುದುಕ ಹೇಳಿದರಂತೆ:

"ಈ ಜನ ಮಾಡುವುದು ಅಲ್ಲಾ ಮೆಚ್ಚದ ಕೆಲಸ. ಏನು ಕದ್ದೆ, ಯಾವ ತುಡುಗು ಮಾಡಿದೆ-ಎಂತ ಈ ಶಿಕ್ಷೆ? ಖೂನಿ ಮಾಡಿದವರಿಗೆ ಹಾಕುವ ಹಾತ್‌ಬೇಡಿ ನನಗೆ! ಭೇಷ್ !"

ನಾಯಕರು ಹೇಳಿದರಂತೆ:

"ಹಿಂದೆ ಒಮ್ಮೆ ಕಾಂಗ್ರೆಸ್ ಸತ್ಯಾಗ್ರಹ ಆದಾಗ ನನ್ನ ಕೈಗೆ ಬೇಡಿ ಬಿದ್ದಿತ್ತು—ಈಗ ರೈತ ಚಳುವಳಿ ಮಾಡಿದ್ದಕ್ಕೂ ಬೇಡಿ. ಇರಲಿ. ಸಾಯುವ ಮೊದಲು ಈ ಗೌರವ ಇನ್ನೊಮ್ಮೆ ಬಂತಲ್ಲ!"

ಹೀಗೆ ಅವರಿಬ್ಬರು ಮಾತಾಡಿದರೆಂಬ ಸುದ್ದಿ ಹಬ್ಬತೊಡಗಿತು.

ಹಳ್ಳಿಗೆ ಹಳ್ಳಿಯೇ ಆಗಲೇ ಮುಟ್ಟೂರಿಗೆ ಹೋಗಬೇಕೆಂದು ಕೆಲವರು

ಒತ್ತಾಯಪಡಿಸತೊಡಗಿದರು. ಆದರೆ ಕೊನೆಗೆ, ನಿರಲದಿಂದ ಬಸಪ್ಪ ಬರುವ ತನಕ ಕಾದಿರಬೇಕೆಂದು ತೀರ್ಮಾನವಾಯಿತು.

ರಾತ್ರಿ ಎಂಟು ಗಂಟೆಗೆ ನಿರಲ ರೈತ ಸಂಘದ ಕಾರ್ಯದರ್ಶಿ ಬಸಪ್ಪ ಬಂದ.

"ಹೆದರಬೇಡಿ, ಹೆದರಬೇಡಿ," ಎಂದ ಬಸಪ್ಪ.

ಅವನ ಎತ್ತರದ ದೇಹ ಮತ್ತೂ ಸ್ವಲ್ಪ ಎತ್ತರವಾಗಿ ಕಾಣಿಸುತಿತ್ತು. ಆ ದಿನ ಸ್ವರದ ತೀಕ್ಷ್ಣತೆ ಹೆಚ್ಚಾಗಿತ್ತು.

ಅವನು ಹೇಳಿದ :

"ಆದದ್ದೆಲ್ಲಾ ಛಲೋ ಆತು. ನಾಳೆ ನಸುಕಿಲೆ ಮೆರವಣಿಗೆ ತಗೊಂಡು ಹೊರಟು ಬಿಡೋಣ. ನಲಗ, ಸಣ್ಣೂರು, ಚಿಮಾರ,–ಎಲ್ಲ ರೈತರದೂ ಮೆರವಣಿಗೆ ಬರೋದೈತಿ. ನೋಡೂಣಂತ ಮುಖಂಡರ್ನ ಎಲ್ಲಿಗೆ ಒಯ್ತಾರೊ ನೋಡೂಣು...."

ಆ ರಾತ್ರಿ ಗಂಭೀರ ವಾತಾವರಣ ಹಳ್ಳಿಯನ್ನು ಪಸರಿಸಿತ್ತು. ಮಿಣಿಮಿಣಿ ಎಳ್ಳೆಣ್ಣೆ ದೀಪಗಳು ಅಲ್ಲಲ್ಲಿ ಉರಿಯುತಿದ್ದುವು. ನಾಯಿಗಳು ಆಗಾಗ್ಗೆ ಕಚ್ಚಾಡುತಿದ್ದುವು.

ಬೆಳ್ಳಿ ಚಿಕ್ಕೆ ಮೂಡುವ ಕಾಲಕ್ಕೆ ಎಲ್ಲರೂ ಎಚ್ಚರಾದರು.

ನಡೆಯಲಾಗದವರು, ಹಣ್ಣು ಮುದುಕರು, ಹಸುಳೆ ಮಕ್ಕಳು—ಇಷ್ಟು ಜನ ಮಾತ್ರ ಮನೆಗಳಲ್ಲೇ ಉಳಿದರು. ಆ ದಿನ ಹೊಲಕ್ಕೆ ಯಾರೂ ಹೋಗಲಿಲ್ಲ. ಹೆಂಗಸರು ಬುತ್ತಿ ಕಟ್ಟಿದರು. ಗಂಡಸರು ರುಮಾಲು ಸುತ್ತಿದರು. ಉತ್ಸಾಹದ ಹುಡುಗ ಹುಡುಗಿಯರು ಬಾವುಟ ಹಿಡಿದರು. ಒಳ್ಳೆಯ ಕಂಠವಿದ್ದವರು ದೇಶಪ್ರೇಮದ ಹಾಡು ಹಾಡಿದರು.

ಕತ್ತಲೆಯನ್ನು ಹೊಡೆದೋಡಿಸುತ್ತ, ಬೆಳಕನ್ನು ಬಾ ಎನ್ನುತ್ತ, ರೈತ ಸಮುದಾಯದ ತೋಳಿ ಹೊರಟಿತು.

........ಅವರು ಮುಟ್ಟೂರಿಗೆ ಹೋಗುವವರು. ಅಲ್ಲಿ ಅಧಿಕಾರಿಗಳನ್ನು ಕಂಡು "ನೀವು ಮಾಡಿದ್ದು ತಪ್ಪು; ನಮ್ಮವರನ್ನು ಬಿಡಿರಿ" ಎನ್ನುವರು. ನೇಮನಾಯಕ, ಆಲೀಖಾನ ಇಬ್ಬರನ್ನೂ ಬಿಡಿಸಿ ವಿಜೃಂಭಣೆಯಿಂದ ಹಿಂದೆ ತಂದು ಅವರ ಗ್ರಾಮಕ್ಕೆ ಮುಟ್ಟಿಸಿ, ಅಲ್ಲಿಂದ ತಮ್ಮ ತಮ್ಮ ಮನೆಗೆ ಮರಳು

ವರು. ತಮಗೆ ಆಗ ಜಯವಾಗುವುದು, ತಮ್ಮ ಶಕ್ತಿ ಆಗ ಸರಕಾರಕ್ಕೆ ತಿಳಿಯುವುದು !........

"ರೈತ ಸಂಘಕ್ಕೆ ಜಯವಾಗಲಿ !" ಎಂದು ಅವರು ಘೋಷಿಸಿದರು.

"ಇಂಕ್ವಿಲಾಬ್ ಜಿಂದಾಬಾದ್ !"

"ನಮ್ಮ ಮುಖಂಡರನ್ನು ಬಿಟ್ಟುಬಿಡಿರಿ !"

"ಹೊಲ ಯಾರದು ? ರೈತನದು !"

ಕೆಲವರು ಸಿಟ್ಟಿಗೆದ್ದದ್ದು ಆ ಕೊನೆಯ ಘೋಷವನ್ನು ಕೇಳಿ. ಹೊಲ ರೈತನದಂತೆ! ಹೊಲ ಜಮೀನ್ದಾರನದು. ರೈತ ದುಡಿಯುವ ಆಳು. ಅವನ್ನೊಪ್ಪದೆ ಹೊಲ ರೈತನದೆಂದು ಹೇಳುವುದೇ ?

ಆದರೆ ರೈತರು, "ಈಗಲೇ ಹೊಲ ವಶಪಡಿಸಿಕೊಳ್ಳುತ್ತೇವೆ" ಎನ್ನಲಿಲ್ಲ. ಕಾಂಗ್ರೆಸ್ ಸರಕಾರ ತಂದ ಹೊಲ ಸಾಗುವಳಿ ಕಾಯಿದೆ—ಟೆನೆನ್ಸಿ ಆಕ್ಟು—ಸರಿಯಾಗಿ ನಡೆಯಲಿ ಎಂಬುದು ಅವರ ಆಸೆ. ಅದನ್ನು ಅವರು ಸ್ವಾಗತಿಸಿದ್ದಾರೆ. ಆದರೆ ಆಕ್ಟಿನ ಕಣ್ಣು ತಪ್ಪಿಸಿ ಜಮೀನ್ದಾರರು ಮೋಸ ಮಾಡುವುದು ಬೇಡ. ಮೋಸ ಮಾಡಲು ಬಿಡಲಾರೆವು !—ಎನ್ನುವುದು ರೈತರ ಖಂಡತುಂಡ ಸ್ಪಷ್ಟೋಕ್ತಿ.

ಇದು ಹೊಲದೊಡೆಯ ಶ್ರೀಮಂತ ವರ್ಗಕ್ಕೆ ಹೇಗೆ ಸಹನೆಯಾದೀತು ? ಅವರ ಆಪ್ತರಾದ ಅಧಿಕಾರಿ ಬಳಗ, ರೈತರ ಈ ಮನೋವೃತ್ತಿಯಿಂದ ಶಾಂತಿ ಭಂಗವಾಗುವ ಸಂಭವವಿದೆ ಎಂದು ಹೇಗೆ ತೀರ್ಮಾನಿಸದೆ ಇದ್ದೀತು ?

........ಮುಟ್ಟೂರು ಕೋರ್ಟು ಆರಂಭವಾಗುವುದು ಹನ್ನೊಂದು ಗಂಟೆಗೆ.

ಆದರೆ ಒಬ್ಬರು ಇನ್ನೊಬ್ಬರನ್ನು ಸೇರಿ, ಒಂದು ಹಳ್ಳಿಯವರು ಇನ್ನೊಂದು ಹಳ್ಳಿಯವರನ್ನು ಕೂಡಿಕೊಂಡು, ಮೆರವಣಿಗೆ ಉದ್ದದ ಮೆರವಣಿಗೆಯಾಗಿ, ಹತ್ತು ಹೊಡೆಯುವದರೊಳಗಾಗಿಯೇ ರೈತರು ಮುಟ್ಟೂರನ್ನು ಸೇರಿದರು.

ನಗರದಲ್ಲಿ ಆಗ ಜೀವ ಸಂಚಾರವಾಗುತಿತ್ತು. ಅಂಗಡಿಗಳನ್ನು ತೆರೆದಿದ್ದರು. ಕಚೇರಿಯವರು ಬಿರುಸು ಬಿರುಸಾಗಿ ನಡೆಯುತ್ತಿದ್ದರು. ಹನ್ನೊಂದು ಗಂಟೆಯ ಸಾಲೆಗೆಂದು ಹೊರಟ ಹುಡುಗರು ಅಲ್ಲಿ ಇಲ್ಲಿ ಬೀದಿ ತುಂಬ ತುಂಬಿ

ದ್ದರು. ಉಡುಪಿ ಬ್ರಾಹ್ಮಣರದೊಂದು ಹೋಟೆಲಿನ ಫೋನೋ "ತುಮ್‌ನೆ ಮುಜ್ ಕೋ ಪ್ರೇಮ ಸಿಖಾಯಾ" ಹಾಡುತಿತ್ತು.

ಹಳ್ಳಿಗವಾರರ ಜಯಘೋಷ—ಮೆರವಣಿಗೆ ಊರಿನ ಶಾಂತಿಯನ್ನು ಕದಡಿತು. ಗುಸು ಗುಸು ಮಾತಾಡಿದರು ಜನ. ಮಧ್ಯಮ ವರ್ಗದವರೆಲ್ಲ ಕೂತಲ್ಲೇ ನಿಂತಲ್ಲೇ ಕಣ್ಣು ಬಿಟ್ಟು ನೋಡಿದರು. ಕಿವಿಗೊಟ್ಟು ಕೇಳಿದರು. ಸಭ್ಯತೆಯ ಯಾವ ಲಕ್ಷಣವೂ ಇಲ್ಲದೆ, ಯಾವ "ಲಜ್ಜೆ"ಯೂ ಇಲ್ಲದೆ, ಯಾವು ಯಾವುದೋ ಹಾಡು ಹಾಡುತ್ತ ಕೆಂಪು ಬಾವುಟ ಹಿಡಿದುಕೊಂಡು ನೇರವಾಗಿ ಬೀದಿಯುದ್ದಕ್ಕೂ ನಡೆಯುತ್ತಿದ್ದರು ರೈತ ಯುವಕ ಯುವತಿಯರು, ಇಳಿ ವಯಸ್ಸಿನ ನರೆಗೂದಲ ಮುದುಕ ಮುದುಕಿಯರು.

"ಅವರ ಮುಖಂಡರನ್ನು ಬಂಧಿಸಿದ್ದಾರಂತೆ. ಬಿಡಿಸಿಕೊಂಡು ಹೋಗಲು ಬಂದಿದ್ದಾರೆ ರೈತ ಸಂಘದ ಜನ" ಎನ್ನುವ ಮಾತು ಪ್ರಚಾರ ವಾಯಿತು.

ಊರೆಲ್ಲ ಸುತ್ತಾಡಿದ ಸಾವಿರ ಎರಡು ಸಾವಿರ ರೈತ ಸ್ತ್ರೀ ಪುರುಷರು ಕೋರ್ಟಿನ ಆವಾರದೊಳಕ್ಕೆ ಬಂದರು.

ಆಗ ಗದ್ದಲವಾಯಿತು. ಪೋಲೀಸ್ ಅಧಿಕಾರಿಗಳು ಕೋರ್ಟಿನ ಸುತ್ತಲೂ ರಕ್ಷಣೆಯ ರಿಸರ್ವ್ ದಳವನ್ನಿಟ್ಟರು.

ಡಿ. ಎಸ್. ಪಿ. ಬಂದು ಹೇಳಿದ :

"ಯಾಕೆ ಬಂದೀರಿ ಇಲ್ಲೆ ? ಹೊರಟು ಹೋಗ್ರಿ........"

ಒಬ್ಬರೂ ಮಿಸುಕಾಡಲಿಲ್ಲ.

ಸಂಘದವನೊಬ್ಬ ಕೇಳಿದ :

"ಕೋರ್ಟು ಐತೇನ್ರಿ ಈಗ ?"

ಡಿ. ಎಸ್. ಪಿ. ಸಿಟ್ಟು ಬೆಂಕಿಯಾಗಿ ಗರ್ಜಿಸಿದ :

"ಐತಿ ; ಯಾಕ ?"

ಶಾಂತ ಮತ್ತು ಗಂಭೀರ ಧ್ವನಿಯಲ್ಲಿ ಉತ್ತರ ಬಂತು :

"ನಮ್ಮ ಮಂದಿ ಇಬ್ಬರ ವಿಚಾರಣೆ ಐತಿ. ಅದು ಖುಲಾಸೆ ಆಗೋ ಮಟ ಇಲ್ಲೇ ಇರಾವ್ರು ನಾವು".

ದೂರ ನಿಂತಿದ್ದ ಊರಿನ ಶಾಲೆಯ ಕೆಲ ಹುಡುಗರಲ್ಲಿ ಯಾರೋ

ಕೆಲವರು ಅಧಿಕಾರಿಯನ್ನು ನೋಡಿ, "ಬುಲ್‌ಡಾಗ್" ಎಂದರು. ಆತ ಬುಸು ಗುಟ್ಟುತ್ತಾ ಒಳಗೆ ಹೋದ.

ಒಂದು ತಾಸಿನ ಹೊತ್ತಾದರೂ ನ್ಯಾಯಾಧೀಶರಾಯರು ಬರಲಿಲ್ಲ. ಆದರೆ ಹೊರಗಿನಿಂದ ಮತ್ತೆ ಐವತ್ತು ಪೋಲೀಸರು ಬಂದರು. ರೈತ ಹೆಂಗಳೆಯರೂ ಗಂಡಸರೂ ಹಾಡುತ್ತ ಕುಳಿತರು. ಊರಿನ ಜನ ಆ ಬಯಲು ಪ್ರದೇಶದಲ್ಲೆಲ್ಲ ಉರಿ ಬಿಸಿಲನ್ನು ಲೆಕ್ಕಿಸದೆ ಮೂಗಿನ ಮೇಲೆ ಬೊಟ್ಟಿಟ್ಟು ನಿಂತರು.

ಡಿ. ಎಸ್. ಪಿ. ಆಜ್ಞಾಪಿಸಿದ :

"ಹಾಡುವುದು ಬಂದ್‌ಮಾಡ್ರಿ."

ಯಾರೋ ಸೀನಿದರು ; ಯಾರೋ ನಕ್ಕರು ; ಯಾರೋ ಕೂ ಎಂದರು. ನಿಂತು ನೋಡುತ್ತಿದ್ದವರೋ, ಕುಳಿತು ಹಾಡುತ್ತಿದ್ದವರೋ, ಅಂತೂ ಯಾರೋ! ಕಂಪಿಸುತ್ತ ಅಧಿಕಾರಿ ಪೋಲೀಸರನ್ನು ನೋಡಿ ಕರ್ಕಶ ಧ್ವನಿಯಲ್ಲಿ ಏನನ್ನೋ ಒದರಿದ. ಆ ಐವತ್ತು ಮಂದಿ ಕೈ ಬಡಿಗೆಗಳನ್ನು ಮೇಲಕ್ಕೆತ್ತಿದರು. ರೈತ ಸಮುದಾಯವೂ ಎದ್ದು ನಿಂತಿತು. ಮುಟ್ಟೂರಿನ ಮಧ್ಯಮ ವರ್ಗದವರ ಹೃದಯ ಡವಡವನೆ ಹೊಡೆದು ಕೊಂಡಿತು.

ಇನ್ನೇನಾಗುವುದು ? ಇನ್ನೇನಾಗುವುದು ?

ಅಧಿಕಾರಿ ಸಿಳ್ಳು ಹೊಡೆದ. ನ್ಯಾಯಾಧೀಶರ ಕಾರೂ ಅಷ್ಟರಲ್ಲೇ ಹಾರನ್ ಮಾಡುತ್ತಾ ಬಂತು. ಅಧಿಕಾರಿ "ಡ್ಯಾಮಿಟ್" ಎಂದ. ಲಾಠೀ ಚಾರ್ಜು ಆಗಲಿಲ್ಲ. ಅಧಿಕಾರಿ ನ್ಯಾಯಾಧೀಶರೊಡನೆ ಮಾತಾಡಿದ.

ಅವರು ಹೇಳಿದರು :

"ಸುಮ್ಮನೆ ಕೂಡಲು ಹೇಳಿ. ಜಜ್‌ಮೆಂಟ್ ಆದ ಮೇಲೆ ಬಂದ ಹಾದಿ ಹಿಡಿಯಲಿ!"

ಅವಮಾನಿತರಾದವರಂತೆ ರೈತರು ಒಬ್ಬರ ಮುಖವನ್ನೊಬ್ಬರು ನೋಡಿದರು.

ಪೋಲೀಸು ಲಾರಿ ಗಡಗಡ ಎನ್ನುತ್ತ ಬಂತು.

ನೆರೆದಿದ್ದ ಜನಸ್ತೋಮ ನೋಡುತ್ತಿದ್ದಂತೆ ಆ ಮುದುಕರಿಬ್ಬರು ಇಳಿದು

ಬಂದರು. ಆಲೀಖಾನರ ಎಡಕ್ಕೈಗೂ ನಾಯಕರ ಬಲಕ್ಕೈಗೂ ಕೂಡಿಯೇ ಬೇಡಿ ಹಾಕಿದ್ದರು. ಸುಟ್ಟೂರಿನ ಜನ ಬೊಟ್ಟು ಮಾಡಿ ತೋರಿಸಿದರು: "ಅವರು ! ಅವರು !"

ನೆರೆದಿದ್ದ ರೈತರೆಡೆಯಿಂದ ಘೋಷ ಮೊಳಗಿತು:

"ಆಲೀಖಾನರಿಗೆ ಜಯವಾಗಲಿ ! ನೇಮನಾಯಕರಿಗೆ ಜಯವಾಗಲಿ ! ಕಿಸಾನ ಸಭಾ ಕಿ ಜಯ್ !"

ಚಿಮೂರಿನ ರೈತ ಮುಖಂಡ ಹೇಳಿದ:

"ನಿನ್ನೆ ಒಬ್ಬರ ಹೆಗಲ ಮೇಲೊಬ್ಬರು ಕೈ ಇಟ್ಟು ನಡೆದಿದ್ದರು. ಈ ದಿವಸ ಒಬ್ಬರ ಕೈಯಲ್ಲಿ ಇನ್ನೊಬ್ಬರ ಕೈ !"

ಯಾರೋ ಘೋಷಣೆ ಮಾಡಿದರು-ಎಲ್ಲರೂ ಸ್ವರ ಕೂಡಿಸಿದರು.

"ನಮ್ಮ ಮುಖಂಡರಿಗೆ ಅಭಿನಂದನೆ !"

ಆ ಮುದುಕರಿಬ್ಬರ ಮುಖಗಳೂ ತೇಜಃಪುಂಜವಾದುವು. ಆ ನಾಲ್ಕು ಕಣ್ಣುಗಳು ತುಂಬಿ ಬಂದುವು.

ಪೋಲೀಸರ ರಕ್ಷಣೆಯಲ್ಲಿ ಅವರನ್ನು ಒಳಕ್ಕೊಯ್ದರು. ಹೊರಗೆ ಜನರ ಒತ್ತಡ ಹೆಚ್ಚಿತು.

ಒಳಗೆ ವಿಚಾರಣೆಯಾಯಿತಂತೆ. ಹೊರಗಿನ ಯಾರಿಗೂ ಅದು ಗೊತ್ತಾಗಲಿಲ್ಲ.

"ನೀವು ಕೊಲೆ-ಸುಲಿಗೆ-ಹಿಂಸೆ ಮಾಡುವಂತೆ ಅಜ್ಞರಾದ ಹಳ್ಳಿಯವರನ್ನು ಪ್ರೇರೇಪಿಸಿದ್ದೀರಿ" ಎಂದು ಆರೋಪಿಸಲಾಯಿತಂತೆ.

"ಸುಳ್ಳು!" ಎಂದು ಮುದುಕರಿಬ್ಬರೂ ಉತ್ತರವಿತ್ತರಂತೆ.

"ನಾವು ರೈತ ಸಂಘದವರು. ಹಿಂಸೆಮಾಡುವ ದರೋಡೆಖೋರರಲ್ಲ. ನಮ್ಮದು ನ್ಯಾಯಬದ್ಧ ಹೋರಾಟ. ನಮ್ಮ ಹಳ್ಳಿಗಳಲ್ಲಿ ಹಿಂಸೆಯ ಕೃತಿ ಒಂದೇ ಒಂದು ಎಲ್ಲಿಯೂ ಆಗಲಿಲ್ಲವಲ್ಲ !" ಎಂದರಂತೆ.

"ನೀವು ಸರಕಾರಕ್ಕೆ ದ್ರೋಹ ಬಗೆಯುತ್ತಿದ್ದೀರಿ," ಎಂದರಂತೆ ಪೋಲೀಸ್ ಪ್ರಾಸಿಕ್ಯೂಟರರು.

"ದ್ರೋಹವೆಂದರೇನು ? ಇರುವ ಸಾಗುವಳಿ ಶಾಸನವನ್ನು ಕೃತಿಗೆ ಇಳಿಸುತ್ತಿರುವವರು ನಾವು. ಕಾಯಿದೆಯನ್ನು ವಿರೋಧಿಸಿ ಮೋಸಮಾಡುತ್ತಿರು

ವವರು, ಜನತೆಗೆ ದ್ರೋಹಮಾಡುತ್ತಿರುವವರು, ಹೊಲದೊಡೆಯರು", ಎಂದು ಅವರಿಬ್ಬರೂ ಉತ್ತರಕೊಟ್ಟರಂತೆ.

"ನಮ್ಮನ್ನು ಬಿಡಿ. ಹೊಲದೊಡೆಯರನ್ನು ಬಂಧಿಸಿರಿ. ರೈತರ ಸಂಘ ಬೆಳೆಯಲಿ. ಜಮೀನ್ದಾರರ ಸಂಘದವರನ್ನು ವಿಚಾರಣೆಗೆ ಗುರಿಮಾಡಿ," ಎಂದು ಅವರು ಆಹ್ವಾನವಿತ್ತರಂತೆ.

ಒಂದು ತಾಸು ಕಳೆದ ಮೇಲೆ ತೀರ್ಪಾಯಿತಂತೆ.

"ಪೋಲೀಸ್ ಆಕ್ಟಿನ ಗುಂಡಾ ಕಾಯಿದೆಯನ್ವಯ ಸೇಮನಾಯಕ ಆಲೀಖಾನ ಇಬ್ಬರನ್ನೂ ಜಿಲ್ಲೆಯಿಂದ ಹೊರಹಾಕಲಾಗಿದೆ."

....ಮುದುಕರನ್ನು ಮರಳಿ ಪೋಲೀಸ್ ಲಾರಿಯ ಬಳಿಗೆ ತಂದಾಗ ನಡೆದದ್ದು ಎಲ್ಲರಿಗೂ ತಿಳಿಯಿತು.

ಹೊರ ಹಾಕಿವರಂತೆ. ಹದ್ದುಪಾರು ಆಜ್ಞೆಯಂತೆ. ಗಡೀಪಾರಾಜ್ಞೆಯಂತೆ! ಆ ಮುದುಕರನ್ನು! ಜಿಲ್ಲೆಯಿಂದ ಹೊರಗೆ! ಓ ದೇವರೇ !

ಉದ್ರೇಕಗೊಂಡ ರೈತ ಸಮುದಾಯ ಲಾರಿಯನ್ನು ಮುತ್ತಿತು.

"ನಮ್ಮ ಮುಖಂಡರನ್ನು ಬಿಟ್ಟುಬಿಡಿರಿ!" ಎಂದು ರೈತರು ಗರ್ಜಿಸಿದರು.

ಆ ಗರ್ಜನೆಗೆ ಉತ್ತರ, ಬಲವಾದ ಲಾಠೀ ಚಾರ್ಜು, ಜನ ಚೆದರಲೆಂದು ಆಕಾಶದತ್ತ ಹೊಡೆದ ಬಂದೂಕಿನ ಎರಡು ಗುಂಡು.

ಮೋಟಾರು ಬಲು ಪ್ರಯಾಸದಿಂದ ಹೊರಟುಹೋಯಿತು. ಪೋಲೀಸರು ಶಾಂತಿಪಾಲನೆಯ ಕರ್ತವ್ಯ ನೆರವೇರಿಸಿದರು.

ಮಧ್ಯಾಹ್ನದ ಊಟಕ್ಕೆಂದು ಹೊರ ಬಂದಿದ್ದ ಸಾಲೆಯ ಹುಡುಗರು ಮುಖ ಕಿರಿದು ಮಾಡಿ ನಿಂತರು. ಮಧ್ಯಮ ವರ್ಗದ ಜನ ಮುಖ ಬೆವರೊರೆಸಿದರು.

ವಾತಾವರಣವೆಲ್ಲ ಕೆಂಧೂಳಿಯಿಂದ ತುಂಬಿತು. ಮರದೆಲೆಗಳು ಬಾಡಿದುವು. ಮರುಭೂಮಿಯ ಬಣಗುಡುವ ಮೌನ ಹರಡಿತು.

ಬಂದ ಮೆರವಣಿಗೆ ತಲೆ ಬಾಗಿಸಿ ಭಾರವಾದ ಹೃದಯದಿಂದ ಹಿಂತಿರುಗುವ ಹೊತ್ತು.

........ಪೋಲೀಸು ಮೋಟಾರು ಸಂಜೆ ಆರು ಗಂಟೆಗೆ ಜಿಲ್ಲೆಯ ಗಡಿಯನ್ನು ತಲಪಿತು. ಅಲ್ಲಿ ಆ ಮುದುಕರನ್ನು ಇಳಿಸಿದರು.

ಅವರಿನ್ನು ಮುದುಕರಲ್ಲ; ಗುಂಡರು. ಜಾತೀಯ ಗಲಭೆಯಾದಾಗ, ಹಿಂದೂ-ಮುಸಲ್ಮಾನ ಕಲಹವಾದಾಗ, ಪುಂಡರನ್ನು ಬಂಧಿಸಿ ಆ ಪ್ರದೇಶದಿಂದ ಹೊರಕ್ಕೆ ಗಡೀಪಾರು ಮಾಡಲೆಂದು ಆ ಪೋಲೀಸ್ ಆಕ್ಟನ್ನು-ಗುಂಡಾ ಕಾಯಿದೆಯನ್ನು ತಯಾರಿಸಲಾಗಿತ್ತು.

ಆದರೆ ಈಗ ಅದೇ ಶಾಸನವನ್ನು, ರೈತ ಚಳುವಳಿಯ ಇಬ್ಬರು ಮುಖಂಡರ ಮೇಲೆ—ಒಬ್ಬ ಹಿಂದೂ ಇನ್ನೊಬ್ಬ ಮುಸಲ್ಮಾನ—ಇವರಿಬ್ಬರ ಮೇಲೆ, ಪ್ರಯೋಗಿಸಲಾಗಿತ್ತು. ಅವರನ್ನು "ಗುಂಡ"ರೆಂದು ನಾಮಕರಣ ಮಾಡಲಾಗಿತ್ತು.

ಆ ಎತ್ತರದಲ್ಲಿ ನಿಂತು, ಪಶ್ಚಿಮದತ್ತ ನೋಡುತ್ತ, ತಮ್ಮ ನಾಡನ್ನು ನಿರೀಕ್ಷಿಸುತ್ತ ಆ ಇಬ್ಬರು ಗುಂಡರು ನಿಂತರು. ಮುಳುಗುವ ಸೂರ್ಯನ ಹೊಂಬಣ್ಣ ಅವರ ಬಳಲಿದ ಮುಖದ ಮೇಲೆ ಬೆಳಕು ಚೆಲ್ಲಿತ್ತು. ನೇಮನಾಯಕರ ಮೀಸೆ, ಮನದ ದುಗುಡವನ್ನು ಪ್ರತಿಬಿಂಬಿಸುತ್ತ, ಕುಣಿಯುತಿತ್ತು. ಆಲೀಖಾನರ ಬೋಳುತಲೆ ಚಕಚಕಿಸುತಿತ್ತು; ಬಿಳಿಯ ಗಡ್ಡ ಹಾರಾಡುತಿತ್ತು.

ಕೆಳಗೆ ಕಾಣುತ್ತಿರುವುದು ಅವರು ಮೈ ಮುರಿದು ದುಡಿದಿದ್ದ ಭೂಮಿ. ಅಲ್ಲೇ ಅವರು ಹುಟ್ಟಿದ್ದು ಬೆಳೆದದ್ದು. ಆ ಕರಾವಳಿಯ ಪ್ರಿಯಕರವಾದ ಹವೆ, ಆ ಶೋಷಕ ಜಮೀನ್ದಾರರ ಕ್ರೂರ ಆಳುಗಳು, ಆ ಹೊಳೆ, ಕೆರೆ, ಅಲ್ಲಿನ ಕಳ್ಳ ಸಂತೆಯ ವ್ಯಾಪಾರಿಗಳು, ತಮ್ಮ ಪ್ರೀತಿಯ ಸಂಘಟನೆ-ಜನ-ಕಚೇರಿ-ಬಾವುಟ, ಎಲ್ಲವನ್ನೂ ಬಿಟ್ಟು ಅವರು ಬಂದಿದ್ದರು.

ನಾಯಕನ ಹಿರಿಯ ಮಗನ ಲಗ್ನ, ತಂದೆ ಇಲ್ಲದೆಯೇ ನಡೆಯಬೇಕು. ತನ್ನ ಸೊಸೆಯ ಮೂರನೆ ಹೆರಿಗೆಯ ಕಾಲದಲ್ಲಿ ಮುದುಕ ಆಲೀಖಾನ ಹತ್ತಿರ ಇರಲಾರ.

ತುಂಬಿ ಬರುತಿದ್ದ ಕಣ್ಣುಗಳನ್ನು ಒರಸುತ್ತಾ ಆಲೀಖಾನ ಹೇಳಿದ :

"ಇಲ್ಲಿ ನೇಮು........ಈ ಭೂಮಿಗೆ ನಾವು ಮತ್ತೆ ಹೋಗಿಯೇ ಹೋಗುತ್ತೇವೆ. ಸಾಯುವ ಮೊದಲು ರೈತರ ರಾಜ್ಯ ಆಗಿಯೇ ಆದೀತು........"

ನೇಮು ಮರುಧ್ವನಿ ಕೊಟ್ಟ :

"ಹೌದು ಅಲಿ, ಈ ಪ್ರಿಯ ಭೂಮಿಗೆ ಮತ್ತೆ ಹೋಗಿಯೇ ಹೋಗು ತ್ತೇವೆ."

........ಮುಖಂಡರನ್ನು ಕಳೆದುಕೊಂಡ ರೈತರು ಮೌನವಾಗಿ ಹಳ್ಳಿ ಸೇರಿ, ಆಯಾಸದಿಂದ ಬಳಲಿ, ನಿದ್ದೆ ಹೋದರು. ಗಾಳಿ ತಂಪಾಗಿ ಸದ್ದಿಲ್ಲದೆ ಬಂದು, ಕಳೆಗುಂದಿದ್ದ ಅವರೆಲ್ಲರ ದೇಹಗಳಲ್ಲಿ ಹೊಸ ಚೇತನ ತುಂಬಿತು.

ಆ ರಾತ್ರಿ ಸಂಘದ ಕಚೇರಿಯ ದೊಡ್ಡ ಬಾವುಟ ಮಾತ್ರ ಹಾರಾಡಲೇ ಇಲ್ಲ.

........ಕೋಳಿ ಕೂಗಿತು. ಬೆಳ್ಳಗೆ ಬೆಳಗಾಯಿತು. ಯಾರೋ ಸಂಘದ ಹಾಡನ್ನು ಏರುಧ್ವನಿಯಲ್ಲಿ ಹಾಡುತ್ತಿದ್ದರು. ರೈತ ಸ್ತ್ರೀ ಪುರುಷರು ಎಚ್ಚತ್ತು ಕಣ್ಣೊರಸಿ ನೋಡಿದರು. ಅವರ ಸಂಘದ ಕೆಂಪು ಬಾವುಟ ಎತ್ತರದಲ್ಲಿ ಪಟಪಟನೆ ಹಾರಾಡುತಿತ್ತು. ತನಗೆ ಸೋಲಿಲ್ಲ, ತನಗೆ ಸೋಲಿಲ್ಲ,—ಎಂದು ಅದು ಹೊಯ್ದಾಡುತಿತ್ತು.

---

೧೧ ಮೇ ೧೯೪೭

# ಹೊಸ ಕೂಸು

ಆ ಹುಡುಗಿ ಕರೀಮನ ಮೀಸೆಯ ಮೇಲೆ ಕೈಯಾಡಿಸಿ, ತಲೆಯ ಮೊರಗು ಕೂದಲನ್ನು ಅಮುಕಿ ಹಿಡಿದು, "ಬಾಬಾ, ಪೇಢೆ ಪೇಢೆ ತಗೊಂಡು ಬಾ," ಎನ್ನುತಿದ್ದಳು.

ತಂದೆ ಐಮು ವರ್ಷದ ತನ್ನ ಮಗಳನ್ನು, ಆಕೆಯೇ ತನ್ನ ಜೀವನದ ಸರ್ವಸ್ವ ಎಂತ, ಮುದ್ದಿಡುತಿದ್ದ; ಎದೆಗೆ ಅವಚಿಕೊಳ್ಳುತಿದ್ದ, "ಚಲ್ ಬೇಟಿ, ಪೇಢೆ ತರೂಣು" ಎನ್ನುತ್ತ ಶರಟು ಸಿಕ್ಕಿಸಿಕೊಂಡು, ಟೊಪ್ಪಿಗೆಯ ಧೂಳನ್ನು ಝಾಡಿಸುತಿದ್ದ.

ಆಗ ಸುಂದರಿ ಹೆಂಡತಿ ಉನ್ನೀಸಾ, ಆಶೆಯ ಎರಡೂ ಕಣ್ಣುಗಳಿಂದ ಕರೀಮನನ್ನು ನೋಡುತಿದ್ದಳು. "ಹಾಗೆಯೇ ಬರುತ್ತಾ ಹೂವು ತನ್ನಿ" ಎನ್ನುವುದಕ್ಕೆ ಇನ್ನೊಂದು ಭಾಷೆ ಆ ಕಣ್ಣ ನೋಟ.

ತನ್ನ ಹುಕ್ಕಾ ಬದಿಗಿಟ್ಟು, ಕರೀಮನ ಮುದುಕ ತಂದೆ, "ಬೇಟಾ, ಎರಡು ಬಿಲ್ಲಿ [ಆರು ಕಾಸು] ಚುಟ್ಟಾ [ಬೀಡಿ] ತಾ" ಎಂದು ಆಜ್ಞಾಪಿಸುತಿದ್ದ.

ಇಷ್ಟೆಲ್ಲಾ, ಸಂಜೆ ಬಿಡುವಿದ್ದಾಗ ಮಾತ್ರ. ಸಾಮಾನ್ಯವಾಗಿ ಕರೀಮನ ಪಾಲಿಗೆ ರಾತ್ರಿ ಕೆಲಸ ಬೀಳುತಿತ್ತು. ಅದು ಹದಿನೆಂಟು ತಾಸುಗಳ ಅಖಂಡ ದುಡಿತ. ಆತ ಶಂಟರ್. ಗೂಡ್ಸ್ ಗಾಡಿಯು ಮಾಲು ಒಯ್ಯಬೇಕಾದರೆ ಕರೀಮನೆಂಬ ಕೀಲಿ ಕೆಲಸ ಮಾಡಲೇ ಬೇಕು. ಡಬ್ಬಿಗಳನ್ನು ಒಂದಕ್ಕೊಂದು ಶಂಟ್ ಮಾಡುವುದು ಆತನ ಕೆಲಸ.

ಇಪ್ಪತ್ತನೆಯ ವಯಸ್ಸಿನಲ್ಲಿ ಆತ ಹದಿನೈದು ರೂಪಾಯಿ ಸಂಬಳದ ಮೇಲೆ, ಕೆಂಪು ಮತ್ತು ಹಸುರು ನಿಶಾನೆ ಹಿಡಿಯಲು ಕಲಿತು, ಈಗ ಎಂಟು ವರ್ಷವಾಗಿತ್ತು. ಇಪ್ಪತ್ತೆರಡು ರೂಪಾಯಿಗೆ ಬಂದು ಮುಟ್ಟಿತ್ತು ಅವನ ವೇತನ. ಅತಿ ಹೆಚ್ಚು ಎಂದರೆ ಇಪ್ಪತ್ತೈದಕ್ಕೆ ಅದು ಹೋಗಬಹುದು.

ಮುದುಕಿ ತಾಯಿಯನ್ನು ಜಾಗತಿಕ ಯುದ್ಧದ ಬೇಗೆ, ಎರಡನೇ ವರ್ಷದಲ್ಲೀ ಬಲಿ ತೆಗೆದುಕೊಂಡಿತ್ತು. ಉನ್ನೀಸಳನ್ನು ಮದುವೆಯಾದ ಹೊಸ ಸಂಭ್ರಮ -ಸುಖವನ್ನು ತಾಯಿಯ ಸಾವು ಕೆಡಿಸಿತು.

ಗೂಡ್ಸ್ ಗಾಡಿಯಲ್ಲಿ ಅಕ್ಕಿ ಜೋಳ ರಾಶಿರಾಶಿಯಾಗಿ ಬಂದು ಹೇಳುವ ಕೇಳುವರಿಲ್ಲದೆ ಕೊಳೆಯುತ್ತಿದ್ದಾಗ, ಅಧಿಕಾರಿಗಳ ಅವ್ಯವಸ್ಥೆಯ ಕಾರಣದಿಂದ ಬಡ ಜನ ಕೂಳಿಲ್ಲದೆ ಬಾಯಿ ಬಡಕೊಳ್ಳುತಿದ್ದಾಗ, ಕರೀಮ ಯೋಚಿಸುತಿದ್ದ : "ನಮ್ಮ ಹಾಗೆ ಇನ್ನೆಷ್ಟು ಸಾವಿರ ಜನವೊ !"

ಆದರೂ ಭವಿಷ್ಯತ್ತಿನಲ್ಲಿ ಆಸೆಯಿಟ್ಟು ಬಾಳಿನ ಕಹಿಯನ್ನು ಸಿಹಿ ಮಾಡಲು ಹೊರಟ ಕಟ್ಟಾಳು ಕರೀಂ. ಸಿಗುತಿದ್ದ ಅಲ್ಪ ಸ್ವಲ್ಪ ಯುದ್ಧ ಭತ್ತೆ, ಕಡಿಮೆ ದರದ ರೇಲ್ವೆ ಅಂಗಡಿಯ ದವಸ ಧಾನ್ಯ, ಅವರ ಗುಡಿಸಲಿನ ಮಾಡನ್ನೂ ಗೋಡೆಯನ್ನೂ ಅಡುಗೆಯ ಹೊಗೆ ಕರಿದುಗೊಳಿಸುವಂತೆ ಮಾಡು ತಿದ್ದುವು.

........ಪಾವು ಸೇರು ಪೇಢೆ ತೆಗೆದು ಕಟ್ಟಿದ ಮೇಲೆ ಇನ್ನೊಂದು ಪಾವು ಸೇರು ತರಿಸಿ ಫಾತುಮಳಿಗೆ ತಿನಿಸುತ್ತಾ ಕರೀಮ ಕುಳಿತ. ಬಾಯಿ ತೆರೆದು ಹಲ್ಲು ಕಿಸಿದು ಆ ಹೆಣ್ಣು ಮಗು ನಗುವುದನ್ನು ನೋಡಿದಾಗ ಆತ ಪ್ರಸನ್ನನಾಗುತಿದ್ದ. ದುಡಿತದ ಭಾರದಿಂದ ಮೈ ಕೈ ನೋಯುವುದು, ಶಾಂತಪ್ಪ ನಿಗೆ ಕೊಡಬೇಕಾದ ಇಪ್ಪತ್ತೈದು ರೂಪಾಯಿ ಸಾಲದ ನೆನಪಾಗುವುದು,— ಎಲ್ಲವೂ ಮರೆತು ಹೋಗುತಿತ್ತು.

ಹಿಂದೆ, ಲಗ್ನಕ್ಕೆ ಮುಂಚೆ ಎರಡು ಮೂರು ಸಾರಿ ಸೇರು ಸೇರು ಪೇಢೆ ಕದ್ದೊಯ್ದು ಉನ್ನೀಸಳಿಗೆ ಕರೀಮ ಕೊಟ್ಟಿದ್ದ. ಎದೆ ಡವಡವನೆ ಹೊಡೆದು ಕೊಳ್ಳುತಿದ್ದು, ಪ್ರೇಮದಿಂದಲೂ ಲಜ್ಜೆಯಿಂದಲೂ ಕಣ್ಣು ಮುಖ ತುಂಬಿ ಬಂದಿದ್ದು, ಆಕೆ ಅದನ್ನು ಸ್ವೀಕರಿಸಿದಾಗ ಕರೀಮನಿಗೆ ಲೋಕವೆಲ್ಲ ಮರೆತು ಹೋಗುತಿತ್ತು.

ತಾಯಿ ತಂದೆಯವರನ್ನು, ಉನ್ನೀಸಳನ್ನು, ಮುಂದೆ ತಮಗೆ ಹುಟ್ಟಿದ್ದ ಮಕ್ಕಳು ಮರಿಗಳನ್ನು ಸುಖವಾಗಿಡಬೇಕೆಂದು, ಹಿಂದೆ ಕರೀಮ ಕನಸು ಕಾಣುತಿದ್ದ.

ಆದರೆ ಅದು ಕನಸಿನ ಲೋಕ. ಈ ಸಮಾಜದಲ್ಲಿ ಸುಖವೆನ್ನುವುದು

ಎಲ್ಲರಿಗೂ ಸರಿಸಮಾನವಾಗಿ ಸಿಗುವ ವಸ್ತುವಲ್ಲ; ಅದಕ್ಕೊಂದು ಪರಿಮಿತಿ ಇದೆ ;—ಎಂಬುದನ್ನಾತ ಬಲು ಬೇಗನೆ ತಿಳಿದುಕೊಂಡ.

ನೌಕರರ ಸಂಘದ ಪ್ರಮುಖ ಸದಸ್ಯ ಆತ. ಆ ಅಪರಾಧಕ್ಕಾಗಿ, ಅನ್ಯಾಯವನ್ನು ಕಂಡಾಗ ಸಿಂಹದಂತೆ ಕೆರಳುವ ಅವನ ದುರ್ಗುಣಕ್ಕಾಗಿ, ಭಡತಿಯೂ ಸಿಗಲಿಲ್ಲ. ಮೇಲಧಿಕಾರಿಗಳ ಪ್ರೀತಿಯೂ ದೊರೆಯಲಿಲ್ಲ. ರೈಲ್ವೆ ಕಂಪೆನಿಯ ಬಿಳಿಯ ಮಾಲಿಕರಿಗಾಗಿ ಜೀವ ತೇದು ತೇದು "ಜೋ ಹುಕುಂ" ಎನ್ನುತ್ತ ದುಡಿಯುವವರನ್ನು ಕಂಡಾಗ, ಕರೀಮ ಹೇಸಿ ಕೊಳ್ಳುತಿದ್ದ.

ಆ ತಿಂಗಳು, ದೇಶದ ಆದ್ಯಂತ ಒಂಭತ್ತು ಲಕ್ಷ ರೈಲ್ವೆ ಕೆಲಸಗಾರರ ಮುಷ್ಕರವಾಗುವ ಭೀಷಣ ಧ್ವನಿ, ವರ್ಕ್‌ಶಾಪುಗಳಲ್ಲೂ ರನ್ನಿಂಗ್ ಶೆಡ್ಡು ಗಳಲ್ಲೂ ಪ್ರತಿಧ್ವನಿಸತೊಡಗಿತು. ಎಷ್ಟೋ ವರ್ಷಗಳಿಂದ ತಲೆಹಿಡಿದು ನಿಂತಿದ್ದ ಸಾವಿರ ಗಾಯಗಳ ನರಳಾಟ ಒಮ್ಮೆಲೆ ಓ ಎಂದು ಬಾಯ್ಬಿಡ ತೊಡಗಿತು.

....ಎಂಥ ಚಿತ್ರಣ ಅದು! ಏಪ್ರಿಲ್ ೨೫ರ ನಡುರಾತ್ರಿಯ ಅನಂತರ ಹಿಂದೂಸ್ಥಾನದ ರೈಲು ಮಾರ್ಗಗಳೆಲ್ಲ ನಿದ್ದೆಹೋಗುವುವು. ಒಂದೇ ಒಂದು ರೈಲು ಗಾಡಿಯೂ ಚಲಿಸದು. ಎಂಜಿನ್‌ನಲ್ಲಿ ಹೊಗೆಯಾಡದು. ಸಿಗ್ನಲ್ ಕೈಯಾಡಿಸದು. ದೇಶದ ಜೀವನವೇ ಸ್ತಬ್ಧವಾಗುವುದು. ಜನತೆಯೆಲ್ಲ ಬೆಂಬಲ ನೀಡುವುದು. "ತೊಲಗುವನು ಬಿಳಿದೊಗಲ ಸುಲಿಗೆಗಾರ!"....

"ಇಂಕ್ವಿಲಾಬ್-ಜಿಂದಾಬಾದ್!" ಎಂದಾಗ ಕರೀಮನ ಮೈಯಲ್ಲಿ ಯಾವಾಗಲೂ ಪುಲಕವೇಳುತಿತ್ತು.

ನದಿಯಲ್ಲಿ ನೆರೆಬಂದ ಹಾಗೆ ಉತ್ಸಾಹ ಎಲ್ಲೆಲ್ಲೂ ಉಕ್ಕೇರುತಿತ್ತು. ಮುಷ್ಕರಕ್ಕೆ ಮೊದಲ ಎರಡು ಮೂರು ದಿನ, ಕರೀಮನಾಗಲೀ ಅವನ ಸಹೋದ್ಯೋಗಿಗಳಾಗಲೀ ಯಾರೂ ನಿದ್ದೆ ಮಾಡಲಿಲ್ಲ. ಆ ಕೊನೆಯ ರಾತ್ರಿ ನಿಶಾನೆ ಗಳನ್ನು ಒಪ್ಪಿಸಿ, ಇತರ ಬಂಧುಗಳ ಜತೆಯಲ್ಲಿ, ವೀರನಂತೆ ಹೆಜ್ಜೆಯ ಮೇಲೆ ಹೆಜ್ಜೆ ಇಟ್ಟು, ಗೂಡ್ಸ್ ಶೆಡ್ಡಿನಿಂದ ಹೊರಡುವುದನ್ನು ಕರೀಂ ಕಲ್ಪಿಸಿ ಕೊಂಡಿದ್ದ....

....ಆದರೆ ಆ ಕಲ್ಪನೆ ಕೈಗೂಡಲೇ ಇಲ್ಲ. ಸುಧಾರಣೆಯ ಮನೋ ವೃತ್ತಿಯ ಅವರ ನಾಯಕರು ಮೋಸಮಾಡಿದರು. ಸ್ವಾತಂತ್ರ್ಯ ಬರುತ್ತಿದೆ ಸಾವಧಾನ!" ಎಂದರು ರಾಷ್ಟ್ರೀಯ ಮುಖಂಡರು....ಪೇ ಕಮಿಶನಿನ ಸಲಹೆ ಯಂತೆಯೇ ನಡೆಯುವುದೆಂದಾಯಿತು.

ಪರಿಹಾರ ಹಣವೇನೋ ಸ್ವಲ್ಪ ದೊರೆಯಿತು. ಆ ಪರಿಹಾರದಿಂದ ಹೇಳಿಕೊಳ್ಳುವಂಥ ಯಾವ ಲಾಭವೂ ಕರೀಮನಿಗಾಗಲಿಲ್ಲ.

ದೇಶದಾದ್ಯಂತ ಕೂಲಿಕಾರರ–ರೈತರ ಮುಷ್ಕರ–ಹೋರಾಟಗಳಾಗು ತಿದ್ದುವು. ಜನಪ್ರಿಯವೆಂದು ಕರೆದುಕೊಂಡ ಸರಕಾರಗಳೇ ಅಮಾನುಷ ದಬ್ಬಾಳಿಕೆ ನಡೆಸಿದುವು.

"ನಯಾ ಜಮಾನಾ"ದಲ್ಲಿ ಬರುತಿದ್ದ ಈ ಸತ್ಯಕತೆಗಳನ್ನೆಲ್ಲ ಕರೀಮ ತಂದೆಗೆ ಓದಿ ಹೇಳುತಿದ್ದ. ಹಿಂದೆ ಪೋರ್ಟರಾಗಿ ದುಡಿದಿದ್ದವನು ಆ ಮುದುಕ. ಸಾಕಷ್ಟು ಸಂಕಷ್ಟ ಅನುಭವಿಸಿದ್ದ ಆ ಬಡಕಲು ಜೀವಿಗೆ, ಕೊನೆಯ ಆ ದಿನಗಳಲ್ಲಿ ಯಾರ ಮೇಲೂ ವಿಶ್ವಾಸ ಉಳಿದಿರಲಿಲ್ಲ. ಯಾವು ದನ್ನೋ ಸ್ಮರಿಸಿ ಏನನ್ನೋ ಆತ ಒಟಗುಟ್ಟುತಿದ್ದ. ತೀರಿಕೊಂಡ ಮುದುಕಿಯನ್ನು ನೆನೆಸಿ, "ಅವರು ಕೊಂದರು" ಎಂದು, ಯಾರನ್ನೋ ಶಪಿಸುತಿದ್ದ. ಹುಕ್ಕಾ ಮಾತ್ರ ಗುಡುಗುಡಿಸುತಿತ್ತು. 'ಚುಟ್ಟಾ' ಹೊಗೆ ಯಾಡಿಸುತಿತ್ತು.

ಕರೀಮ, ಉನ್ನೀಸಾಳನ್ನೂ ಕೂಸು ಫಾತುಮಳನ್ನೂ ಕರೆದುಕೊಂಡು ಎರಡು ದಿನಗಳ ಮಟ್ಟಿಗೆ ಒಮ್ಮೆ ತಮ್ಮ ನೆಂಟರಿದ್ದ ದೂರದ ಊರಿಗೆ ಹೋಗಿ ಬಂದ. ಮರಳಿ ಬರುತಿದ್ದಾಗ ಗಾಡಿ, ಹೊತ್ತಿಗೆ ಸರಿಯಾಗಿ ಸಿಗದೆ, ಬೆಳಗು ಮುಂಜಾನೆಯ ತನಕ ಚಳಿಯಲ್ಲಿ ನಡುನಡುಗುತ್ತಾ ಸ್ಟೇಷನಿನಲ್ಲೆ ಅವರು ಹೊತ್ತು ಕಳೆಯಬೇಕಾಯಿತು.

ಹಿಂದಿರುಗಿದ ಬಳಿಕ ಜ್ವರ ಹಿಡಿದು ಮಲಗಿದ ಮಗು ಫಾತುಮಾ, ತಿಂಗ ಳೊಪ್ಪತ್ತಿನ ಮೇಲೆ ಎದ್ದಾಗ, ಸೊರಗಿ ಕಡ್ಡಿಯಾಗಿದ್ದಳು. ಆ ಮುಖ ಮತ್ತೆ ಅರಳಲೇ ಇಲ್ಲ. ಆ ಜೀವ ಮತ್ತೆ ಬಲಿಯಲೇ ಇಲ್ಲ. ಬೆಲೆ ಏರುತ್ತಲೇ ಇದ್ದ ಹಾಲು ಬೆಣ್ಣೆ ಬರಬೇಕೆಲ್ಲಿಂದ? ಆ ಕೂಸು ಹೇಗೆ ನಗಬೇಕು?

ಉನ್ನೀಸಾ ಬೇರೆ, ಬಸುರಿಯಾದಳು. ಕರೀಮನಿಗೆ ಯೋಚನೆಗಿಟ್ಟು ಕೊಂಡಿತು. ಫಾತುಮಳನ್ನು ಹಡೆದ ಮೇಲೊಮ್ಮೆ ಉನ್ನೀಸಳಿಗೆ ಗರ್ಭಸ್ರಾವ ವಾಗಿತ್ತು. ಅವಳಿಗಾದ ಹಿಂಸೆಯನ್ನು ನೋಡಿ ಕರೀಮನ ಜೀವ ಮಿಡು ಕಿತ್ತು. ತಾನು ಎಂದೆಂದೂ ಪಶುವಾಗಲಾರೆ ಎಂದುಕೊಂಡಿದ್ದ. ಬೆಳೆಯು ತಿದ್ದ ಆ ಜವ್ವನ ದೇಹ ಹೆಣ್ಣನ್ನು ಬಯಸುತಿತ್ತು. ಆದರೆ ದುಡಿತ, ಯೂನಿ ಯನ್, 'ನಯಾ ಜಮಾನಾ', ಕೂಸು ಫಾತುಮಳನ ಡುವೆ ಎಲ್ಲ ಆಸೆಯನ್ನೂ ಕರೀಮ ತಡೆ ಹಿಡಿದಿದ್ದ.

ಆದರೆ, ಎಂದೋ ಯಾವಾಗಲೋ, ಉನ್ನೀಸಳ ಎಳೆ ಹರೆಯದ ಜೀವ ಹಂಬಲಿಸಿದಾಗ, ಕರೀಮನೂ ಎಡವಿದಾಗ,—ಮೂರನೆಯ ಅಧ್ಯಾ ಯಕ್ಕೆ ಮೊದಲಾಯಿತು.

ಅದರ ಫಲ ಈ ಬಸುರು. ಕರೀಮನನ್ನು ಕಂಡು ಹೀ ಹೀ ಎಂದು ಅಳುವ ಕೂಸು ಬರಬಹುದು. ಹುಡುಗ ಹುಟ್ಟಲೂ ಬಹುದು. ಕಾಸಿಂ – ಅಬ್ದುಲ್ಲಾ – ಮಹಮ್ಮದ್ – ಮನ್ಸೂರ್, ಯಾವ ಹೆಸರಿಡಬೇಕು ಆ ಕೂಸಿಗೆ ?

ಮತ್ತೆ ಒಮ್ಮೆಲೆ ಅಣಕಿಸುತ್ತ ಬರುತಿತ್ತು ಬಡತನದ ಭೂತ. ಬಾಣಂತಿ ತನದ ವೆಚ್ಚ ? ಕೂಸಿನ ಆರೈಕೆಯ ವೆಚ್ಚ ?

ಚಾಟಿ ಹಿಡಿದ ಪಠಾಣನ, ಆ ಹುರಿಮೀಸೆ-ರುಮಾಲುಗಳ ನೆನಪಾಗು ತಿತ್ತು ಕರೀಮನಿಗೆ. ಜತೆಯಲ್ಲೆ ಕಣ್ಣೆದುರು ಬರುತಿದ್ದುವು—ಅವನ ಯೂನಿ ಯನ್, ಅವನ ಕೆಂಪು ಬಾವುಟ.

"ಇದನ್ನೆಲ್ಲ ಅನುಭವಿಸಿಯೇ ತೀರಬೇಕು ; ನಾನೊಬ್ಬನೇ ಅಲ್ಲವಲ್ಲ !" —ಎಂಬ ಯೋಚನೆ ಕೊನೆಗೆ.

"ನಾವಿಬ್ಬರೇ ಅಲ್ಲ ಉನ್ನೀಸಾ" ಎಂದಾಗ ಅವನ ಹೆಂಡತಿ, ಏನೂ ಅರ್ಥವಾಗದವಳಂತೆ ಕರೀಮನ ಮುಖವನ್ನೇ ನೋಡು ತಿದ್ದಳು.

ರೈಲ್ವೆ ನೌಕರರ ಮಹಾ ಮಂಡಲದ ಕೌನ್ಸಿಲ್ ಸಭೆಗೆ ಪ್ರತಿನಿಧಿಯಾಗಿ ಶಂಟರ್ ಕರೀಮ ಹೊರಟಾಗಲೇ ಫಾತುಮಳಿಗೆ ನೆಗಡಿ-ಕೆಮ್ಮು ಬಲವಾಗಿತ್ತು. ಉರಿ ಬಿಸಿಲಲ್ಲಿ ಓಡಾಡಿ ನೀರು ಕುಡಿದಿರಬೇಕು-ಎನ್ನುತಿದ್ದಳು ಉನ್ನೀಸಾ.

ಕರೀಮ ದೂರ ಪ್ರವಾಸಕ್ಕೆ ಹೊರಟಾಗ ಮಗಳು. "ಬಾಬಾ, ಪೇಢೆ ತಾ, ಪೇಢೆ."

ಕರೀಮ "ಹೂಂ" ಎಂದ. ಹೂಂ-ಎಂತ ತಾನು ಗರ್ಜಿಸಿದ ಹಾಗೆ ಕರೀಮನಿಗೆ ಭಾಸವಾಗಿತ್ತು. ಆದರೆ ವಾಸ್ತವವಾಗಿ ಸ್ವರ ಹೊರಗೆ ಕೇಳಿಸಲಿಲ್ಲ.

ಕೌನ್ಸಿಲ್ ಸಭೆಯಲ್ಲಿ, ಸಂಘವನ್ನು ಒಡೆಯಲು ಬಂದ ರೈಲ್ವೆ ಮ್ಯಾನೇಜ್‌ಮೆಂಟಿನ ಪಂಚಮ ದಳದವರಿಗೂ ಕೂಲಿಕಾರರ ಪ್ರತಿನಿಧಿಗಳಿಗೂ ಹೊಡೆದಾಟವಾಯಿತು. ಶಾಂತಿಸ್ಥಾಪಕರಾದ ಪೋಲೀಸರು ಕರೀಮನ ಮುಖಂಡರನ್ನೇ ಕರೆದೊಯ್ದರು!

ಅತ್ಯಂತ ಕಟುವಾಗಿ ಉಗ್ರನಾಗಿ ಕರೀಮ ಮರಳಿದ. ಆದರೂ ಮಗಳಿಗಾಗಿ, ಆರು ತಿಂಗಳ ಬಸುರಿ ಉನ್ನೀಸಳಿಗಾಗಿ, ಪೇಢೆ ತರದೆ ಇರಲಿಲ್ಲ.

ಆದರೆ ಆ ಪೇಢೆ—

ಯಾರಿಗೆ ಬೇಕಾಗಿತ್ತು ಅದು?

"ಚಾಳ್"ನೊಳಗೆ ಕಾಲಿಟ್ಟಾಗಲೇ ಮೊದಲ ಮನೆಯ ಮುದುಕಿ ಹೇಳಿದಳು:

"ಕರೀಂ! ಫಾತುಮಾಳನ್ನು ಅಲ್ಲಾ ಕರಕೊಂಡ. ಸಾಯಂಕಾಲ ಮೇಲ್ ಗಾಡಿ ಸಿಳ್ಳು ಹಾಕಿದಾಗ ಅವಳೂ ಹೊರಟಳು."

ಹೊರಟಳಂತೆ-ಎಷ್ಟು ಸುಲಭ!

ಗೂಡ್ಸ್ ಗಾಡಿಯಂತೆ ಮನೆಯೊಳಕ್ಕೆ ಬಂದು ಕರೀಂ ಕುಸಿಕುಳಿತ. ಎದೆ ಹೊಡಕೊಂಡು ಗೋಳಿಟ್ಟು ಗೋಳಿಟ್ಟು ಉನ್ನೀಸಾ ನಿದ್ದೆ ಹೋಗಿದ್ದಳು. ಖಾಜಿ ಕೊರಾನ್ ಪಠಿಸುತಿದ್ದ. ಮುದುಕ ತಂದೆಯ ಕಣ್ಣು ಕೆಂಪು ಕೆಂಪಾಗಿ ಆಳಆಳಕ್ಕೆ ಇಳಿದಿದ್ದುವು. ಚಿಮಿಣಿ ದೀಪ ತೂರಾಡುತಿತ್ತು. ಅದರ ನಾಲಿಗೆ ಉದ್ದುದ್ದವಾಗಿ ಆಚೆ-ಈಚೆ ಚಾಚುತಿತ್ತು. ಎದುರು "ಬಾಬಾ, ಪೇಢೆ" ಎಂತ ಇನ್ನೆಂದಿಗೂ ಕರೆಯಲಾರದ ನಿರ್ಜೀವ ಕೂಸು. "ಹೋ-ಹೋ-ಓ" ಎಂದು ದನಿ ತೆಗೆದು ಅಳತೊಡಗಿದ. ಗುಡಿಸಲ ಗೋಡೆಯ ಮೇಲೆ ರೈಲ್ವೆ ನೌಕರ

ಶಾಹಿಯ ಹತ್ತು ನೆರಳುಗಳು ವಿಕಟ ಅಟ್ಟಹಾಸ ಮಾಡುತ್ತ ಕುಣಿಯು ತಿದ್ದುವು........

........ಮರುದಿನ ಮುದುಕ, ಕರೀಮನನ್ನು ಕರೆದು ಹೇಳಿದ :

"ಹುಚ್ಚು ಸೂಳೀಮಗನೇ! ಉನ್ನೀಸಳನ್ನು ಸರಿಯಾಗಿ ನೋಡಿಕೋ.... ಅವಳ ಹೊಟ್ಟೆಯಿಂದ ಕೂಸು ಹೊರಗೆ ಬರಲೇಬೇಕು. ಮೊಮ್ಮಗನ ಮುಖ ನೋಡಿ ಸಾಯುತ್ತೇನೆ. ಹುಷಾರ್ !"

ಕರೀಮ ಹುಚ್ಚನಾಗಲಿಲ್ಲ. ಹುಷಾರಾಗಿಯೇ ಇದ್ದ.

ಸಹೋದ್ಯೋಗಿ ಬಸಪ್ಪ ಮತ್ತು ಖಾದರ್ ಮನೆತನಕ ಬಂದು, ಇಪ್ಪತ್ತು ರೂಪಾಯಿ ಕರೀಮನ ಕೈಯಲ್ಲಿಟ್ಟು ಹೋದರು.

........ಪೇಕಮಿಾಶನಿನ ವರದಿ ಬಂತು. ಕನಿಷ್ಠ ವೇತನ ಮೂವತ್ತು ರೂಪಾಯಿ ಕೊಡುವರಂತೆ. ಯುದ್ಧ ಭತ್ತೆ ಹೆಚ್ಚಿಸುವರಂತೆ. ಆದರೆ ಕಡಿಮೆ ಬೆಲೆಯ ರೈಲ್ವೆ ರೇಶನ್ ಶಾಪು ಮುಚ್ಚುವರಂತೆ.

ಕೂಲಿಕಾರರಿಗೆ ತೃಪ್ತಿಯಾಗಲಿಲ್ಲ. "ಆಗ ಮುಷ್ಕರ ಆಗಿಯೇ ಇರು ತಿದ್ದರೆ ಇಂಥ ಸ್ಥಿತಿ ಎಂದೂ ಬರುತ್ತಿರಲಿಲ್ಲ. ನಮ್ಮಲ್ಲೇ ಒಡಕು. ಕೆಲಸಗಾರರೇ ಒಂದಾಗದೆ ಹೋದರೆ ಜಯ ಹೇಗೆ ಲಭಿಸೀತು ?" ಎಂದು ಕರೀಮ ರೇಗಾಡಿದ.

ಕೊನೆಯಿಲ್ಲದ ದುಡಿತ—ಗೂಡ್ಸ್ ಶಂಟಿಂಗ್, ಕಂದೀಲಿನ ಬೆಳಕು, ಹಸುರು-ಕೆಂಪು ನಿಶಾನೆ.

ದುಷ್ಟರು ಕೆಂಪು ನಿಶಾನೆ ಬೀಸಿ ಫಾತುಮಳನ್ನು ಕಸಿದು ಒಯ್ದಿದ್ದರು.

ಇನ್ನು ಹಸುರು ನಿಶಾನೆಯ ಸರದಿ. ಉನ್ನೀಸ ಹೊಸ ಕೂಸನ್ನು ಜಗತ್ತಿಗೆ ತರುವಳು.

ಆಕೆ ನಗುತ್ತಿರಲಿಲ್ಲ. ಆ ಗಂಭೀರ ಮುಖ ಮುದ್ರೆ ಅವಳಿಗೆ ಹಿರಿತನದ ಕಳೆ ಕೊಟ್ಟಿತ್ತು. ಮೂವತ್ತರ ಕರೀಮ ನಾಲ್ವತ್ತರವನಂತೆ ಕಾಣುತಿದ್ದ. ಹೃದಯ ಯಾವಾಗಲೂ ಭಾರವಾಗಿರುತಿತ್ತು.

ಯೂನಿಯನ್, "ನಯಾ ಜಮಾನಾ"ಗಳಷ್ಟೇ ಆಗಾಗ್ಗೆ ಅವನಿಗೆ ಮನ ಶ್ಶಾಂತಿಯನ್ನು ಕೊಡುತಿದ್ದದ್ದು.

ಉನ್ನೀಸಾ ಬಾಣಂತಿಯಾಗುವ ಕಾಲ ಸಮೀಪಿಸಿತು. ವಾರದ ರಜೆ ಪಡೆದು ಕರೀಮ ಮನೆಯಲ್ಲೇ ನಿಂತ.

ಸೋದರತ್ತೆ ಮಗಳ ಮನೆಗೇ ಬಂದು, ಅಧಿಕಾರ ಸೂತ್ರ ವಹಿಸಿದಳು.

........ಉನ್ನೀಸಳಿಗೆ ಬೇನೆ ಬರುತಿತ್ತು. ಚಾಳ್‌ನ ಒಂದು ಮೂಲೆಯಲ್ಲಿ ಸಂಜೆಯ ತಂಗಾಳಿಯನ್ನು ಎದುರಿಸಿ ನಿಂತು, ಕರೀಮ ಯಾವುದೋ ಹೊಸ ಲೋಕದ ಕನಸು ಕಾಣುತಿದ್ದ.

ಎಂಥ ಹೋರಾಟವಿದು ! ಪ್ರಸವವೇದನೆ ಎಷ್ಟು ಕಠಿನ !

ಅವರೆಲ್ಲ ಬದುಕಬೇಕು ; ಸಂಘಟಿತ ಹೋರಾಟ ನಡೆಸಬೇಕು ; ಹೊಸ ಸಮಾಜ ಕಟ್ಟಬೇಕು.

ಈಯೆಲ್ಲ ಯತ್ನ ಉನ್ನೀಸಾ ಹೊತ್ತಿದ್ದ ಕೂಸಿಗಾಗಿ; ಮುಂದಿನ ಪೀಳಿಗೆಗಾಗಿ. ಯಾವ ಶೋಷಣೆಯೂ ಇಲ್ಲದ ಆ ಲೋಕ ಎಷ್ಟು ಮಧುರವಿದ್ದೀತು ! ಎಷ್ಟು ಸುಂದರವಿದ್ದೀತು !

ಅಂಥ ಲೋಕದಲ್ಲಿ ತನ್ನ ಮಗ ದೊಡ್ಡ ಯಂತ್ರಜ್ಞನಾಗುವ; ರೈಲು ಎಂಜಿನಿನ ಅಪ್ಪನಂಥ ಎಂಜಿನು ತಯಾರಿಸುವ. ದೊಡ್ಡ ಮಹತ್ವದ ಮನುಷ್ಯನಾಗುವ !

ಮಗಳು ಹುಟ್ಟಿದರೆ ? ಹೌದು ; ಫಾತುಮಳ ಜಾಗವನ್ನಾಕೆ ತುಂಬುವಳು. ಘೋಷಾದ ಹೊದಿಕೆ ಇಲ್ಲದೆ, ಅಜ್ಞಾನದ ಅವಕುಂಠನವಿಲ್ಲದೆ, ಜಾಗೃತಿಯ ಬೆಳಕಿನಲ್ಲೇ ಆಕೆ ಬೆಳೆಯುವಳು. ಉರ್ದು ಶಾಲೆಯಲ್ಲಿ ಆಕೆ ಮಾಸ್ತರಣಿಯಾದರೂ ಆದಾಳು. ಹಿಂದುಳಿದಿರುವ ತನ್ನ ಸಮಾಜದ ಹೆಣ್ಣು ಮಕ್ಕಳಲ್ಲಿ ಹೊಸ ಜೀವ ತುಂಬಿಯಾಳು. ಕಾರಿರುಳ ರಾತ್ರಿಗೆ ಉಷಃಕಾಲವ ಒಸಗೆ ತಂದಾಳು.

ಮತ್ತೆ ಫಾತುಮಳ ನೆನಪಾಗುತ್ತ ಕಂಬನಿ ಉಕ್ಕಿ ಬಂತು ಕರೀಮನಿಗೆ.

........ಹಾಗೆ ಎಷ್ಟು ಹೊತ್ತು ನಿಂತಿದ್ದನೋ !

ನೆರೆಮನೆಯ ಹಿಂದೂ ಹುಡುಗಿ ಪ್ರೇಮಾ, ಕರೀಮನ ಕೈ ಹಿಡಿದು ಕಿವಿಯೊಡೆಯುವಂತೆ ಕಿರಿಚುತಿದ್ದಳು :

"ಏ ಕರೀಮಣ್ಣಾ, ಉನ್ನೀಸಾ ಬಹೆನ್ ಹೆತ್ತಾಳೆ! ಪೇಢೆ ತತ್ತಾ ಪೇಢೆ!"

ಆ ಕೂಸು ಗಂಡೋ ಹೆಣ್ಣೋ ಆ ಪ್ರೇಮನಿಗೆ ತಿಳಿಯದು.

ಮುಖವನ್ನೆಲ್ಲ ಬೆಳಗಿಸಿದ ನಗು ನಗುತ್ತಾ ಕರೀಮ, ಇಪ್ಪತ್ತರ ಹುಡುಗನ ಹಾಗೆ, ಮರಿಸಿಂಹದ ಹಾಗೆ, ಮನೆಯ ಕಡೆಗೆ ಜಿಗಿದು ಹೋದ.

•

---

೨೨ ಜೂನ್ ೧೯೪೭

# ಸೈತಾನನ ಸ್ಮಶಾನ ಯಾತ್ರೆ

"ಅಣ್ಣಾ, ಅಣ್ಣಾ!" ಎಂದು ಸುಧಾ ಎರಡುಬಾರಿ ಮೈ ಕುಲುಕಿದಳು.

ಕಣ್ಣು ಹಿಸುಕಿಕೊಂಡು ನಾನು ಎದ್ದು ಕುಳಿತೆ. ಮೇಣದ ಬತ್ತಿ ಹಿಡಿದು ದೇವಿಯ ಹಾಗೆ ನಿಂತಿದ್ದಳು ನನ್ನ ತಂಗಿ.

"ಯಾಕೆ ? ಯಾಕೆ ಸುಧಾ ?" ಎಂದೆ.

"ಯಾರು ಬಂದಿದ್ದಾರೆ ನೋಡು", ಎಂದಳು ಸುಧಾ.

"ನಾನು", ಎಂದಿತು ಬಾಗಿಲಿನಾಚೆ ನಿಂತಿದ್ದ ವ್ಯಕ್ತಿ. ಆ ಗಡಸು ಸ್ವರ ? – ಯಾರು ಬಂದವರು ?

ಸುಧಾ ನಗುನಗುತ್ತಾ ಹೇಳಿದಳು:

"ಮೂರ್ತಿ, ಅಣ್ಣಾ ! ಮೂರ್ತಿ ಬಂದಿದ್ದಾನೆ."

ಮೂರ್ತಿ !

ತುಂಬಿದ ಕಂಠದಿಂದ 'ಬಾ' ಎಂದು ನಾನು ಎರಡೂ ತೋಳು ಚಾಚಿದೆ. "ಬಾ ಧೊರೆ ! ಹೀಗೆ ಬಾ."

ಸುಧಾ ಎವೆ ಇಕ್ಕದೆ ಮೂರ್ತಿಯ ಮುಖವನ್ನೇ ನೋಡುತಿದ್ದಳು. ನಾನೂ ಆ ದೇಹ ನನ್ನೆಡೆಗೆ ಸರಿಯುತಿದ್ದುದನ್ನೇ ದಿಟ್ಟಿಸುತಿದ್ದೆ.

ರೇನು ಕೋಟು, ಆಯಾಸದಿಂದ ಕಳೆಗುಂದಿದ್ದ ಮುಖ, ಕೆಂಪಗಾದ ಕಣ್ಣು, ಕೆದರಿದ ಕೂದಲು, ಮೂರ್ತಿ ಹಾಗೆಯೇ ನನ್ನ ಹಾಸಿಗೆಯ ಮೇಲೆ ದೂರದಲ್ಲಿ ಕುಳಿತ. ಸುಧಾ ಇನ್ನೊಂದು ಕ್ಯಾಂಡಲ್ ಹಚ್ಚಿ ಒಳಹೋದಳು.

"ನಾನು ಬಂದ ಗಾಡಿ ತಡವಾಗಿ ಬಂತೆ ?" ಎಂದು ಮೂರ್ತಿ ಕೇಳಿದ. ಮಾರ್ದವತೆ ಮರೆಯಾಗಿದ್ದ ಸ್ವರ ಅದು.

"ಇಲ್ವಲ್ಲಾ. ಇದೇ ಈಗ ಹೊಡೀತು ಹನ್ನೆರಡೂವರೆ. ಲೈಟ್ಸ್ ಆಫ್ ಆದುವು ಎಂತ ಮಲಕೊಂಡ್ವಿ. ಎಲ್ಲಿಂದ–ಚಳಗೇರಿಯಿಂದ ಬಂದ್ಯಾ ? ಯಾವಾಗ ಹೊರಟೆ ಊರಿಂದ ?"

ಮೂರ್ತಿ ಮೈಸೂರಿಂದ ತಲೆಮರೆಸಿಕೊಂಡು, ಸಂಸ್ಥಾನದ ಗಡಿದಾಟಿ, ನಾನಿದ್ದ ಊರಿನ ಕಡೆಗೆ ಬಂದಿದ್ದ.

"ಮೈಯೆಲ್ಲ ನೋಯುತ್ತೆ........ಮಲಕೋತೀನಿ........ಎಷ್ಟೋ ದಿನದ ಆಯಾಸ...." ಎಂದನಾತ.

"ಸರೀನೇ" ಎಂದು ಎದ್ದು, "ನೀನಿಲ್ಲೇ ಮಲಕ್ಕೋ, ನಾನು ಬೇರೆ ಹಾಸಿಗೆ ಬಿಡಿಸ್ಕೋತೀನಿ" ಎಂದು ಹೇಳಿ, ರೇನು ಕೋಟು ಕಳಚಲೆಂದು ಆತನ ಮೈ ಸವರಿದೆ.

"ಆಃ", ಎಂದು ಬಲಗೈಯಿಂದ ಬಾಯಿ ಮುಚ್ಚಿಕೊಂಡ ಮೂರ್ತಿ ಧ್ವನಿ ತೆಗೆದ.

"ಮೂರ್ತಿ!" ಎಂದೆ.

ಸರ್ವರಕ್ಷಕ ಕೋಟಿನೊಳಗೆ ಅವನ ಎಡಗೈ ಜೋತು ಬಿದ್ದಿತ್ತು.

"ಬಯನೆಟ್ಟು ; ಬಯನೆಟಿನ ತಿವಿತ-ಎಡ ಭುಜಕ್ಕೆ" ಎಂದ ಮೂರ್ತಿ; ಆ ಧ್ವನಿಯಲ್ಲಿ ನಡುಕವಿತ್ತು.

"ಓ !" ಎಂದಳು, ಏನೋ ತಿಂಡಿಯ ತಟ್ಟೆಯೊಡನೆ ಬಾಗಿಲಲ್ಲಿ ನಿಂತಿದ್ದ ತಂಗಿ. ಸುಧೆಯ ಸ್ವರ ಕಂಪಿಸುತಿತ್ತು. ಆದರೆ ಗ್ಲಾಸು ಉರುಳಿ ಬೀಳಲಿಲ್ಲ.

ಅರೆಕ್ಷಣ ಮೂಕರಾದೆವು.

ಮೂರ್ತಿ ನಗಲು ಯತ್ನಿಸುತ್ತಿದ್ದ.

"ಸಾರಿ, ನಿಮ್ಮನ್ನ ಅಪ್ಸೆಟ್ ಮಾಡಿದ್ನೇನೋ"

"ಸುಟ್ಟಿತು ನಿನ್ನ ಶಿಷ್ಟಾಚಾರಾನ....ಅಂತೂ ಗಾಯಗೊಂಡ ಹುಲಿಯಾಗಿ ಬಂದಿದೀಯಲ್ಲಾ ರಾಜಾ."

ಉಕ್ಕಿ ಬರುತಿದ್ದ ಅಭಿಮಾನ, "ಅಪ್ಪಿಕೋ ಅವನನ್ನು-ಹೂಂ" ಎನ್ನುತಿತ್ತು ನನಗೆ. ಸುಧಾ ಸಮೀಪಕ್ಕೆ ಬಂದು, "ತಗೋಣ್ಣ ಒಂದಿಷ್ಟು ತಿಂಡಿ.... ಕುಡಿಯೋಕೆ ಏನೂ ಇಲ್ಲ. ಹಾಲು ಹೆಪ್ಪಾಗಿರ್ಬೇಕು ಇಷ್ಟರಲ್ಲೇ....ಬಿಸಿ ನೀರು ಕಾಸಿ ತರ್ತೀನಿ" ಎಂದಳು.

ಸುಧಾ ಒಳಗೆ ಹೋದಾಗ ಮೂರ್ತಿ ಹೇಳಿದ:

"ನೋಡಿಲ್ಲಿ....ಇಲ್ಲಿ ಮುಟ್ಟಿ ನೋಡು."

ಆ ಬಲಪಕ್ಕದಲ್ಲಿ ಕೋಟಿನೊಳಗೊಂದು ಬಂದೂಕು ಅವಿತು ಕುಳಿತಿತ್ತು.

ಹೂಂ—.

ಮೂರ್ತಿಯ ತಲೆಕೂದಲನ್ನು ಎರಡೂ ಕೈಗಳಿಂದ ಹಿಡಿದೆಳೆದು ಮೂಸಿ ನೋಡಿದೆ. ನನ್ನ ಬಾಯಿಂದ ಯಾವ ಮಾತೂ ಹೊರಡಲಿಲ್ಲ. ಅವನನ್ನು ಎದ್ದು ನಿಲ್ಲಿಸಿ, ಕೋಟು ಕಳಚಿ ಅವನ್ನು ಗೂಟಕ್ಕೆ ನೇತಾಡಿಸಿದೆ. ನನ್ನ ಕಣ್ಣು ಗಳು ತುಂಬಿ ಬರುತಿದ್ದುವು.

"ಮಲಕ್ಕೋ ಮಲಕ್ಕೋ", ಎಂದೆ.

ಮೂರ್ತಿ ಹಾಗೇ ಒರಗಿದ. ಆ ಬಳಲಿದ್ದ ಗಂಡುಗಲಿಯನ್ನು ಹೊದಿಕೆ ಯಿಂದ ಮುಚ್ಚಿದೆ. ಸುಧಾ ನನಗಾಗಿ ಹಾಸಿಗೆ ತಂದಾಗ ಮೂರ್ತಿ ಹೊದಿಕೆ ಯೊಳಗಿಂದಲೇ ಕೇಳಿದ :

"ಯಾವಾಗ ಬಂದೆಮ್ಮಾ ಸ್ವಾಮಿರಾಯರ ಮನೆಯಿಂದ ?"

"ಹೋರಾಟ ಶುರುವಾಗೋದಿಕ್ಕೆ ಒಂದು ವಾರದ ಮೊದಲೇನೇ", ಎಂದಳು ತಂಗಿ.

ಸ್ವಲ್ಪ ಹೊತ್ತಿನಲ್ಲೇ ಹಾಯಾಗಿ ನಿದ್ದೆ ಹೋದ ಮೂರ್ತಿ.

ನಾನು ನಿದ್ದೆಗಾಗಿ ಚಡಪಡಿಸಿದೆ. ಮೋಂಬತ್ತಿಯ ಬೆಳಕಿನಲ್ಲೇ, ಕೈಗೆ ಸಿಕ್ಕಿದ ಯಾವುದೋ ಪುಸ್ತಕ ಓದಲು ಯತ್ನಿಸಿದೆ. 'ನೂರೆಂಟು-ನೂರಹತ್ತು ಎಣಿಸಿದೆ....

ಆಮೇಲೆ ಕನಸು ಬಿತ್ತು.

....ದೊಡ್ಡದೊಂದು ಮೆರವಣಿಗೆ; ಅಸಂಖ್ಯ ಜನ; ಸಾವಿರ ಗಜದ ಶವ ದಾನಿಯೊಂದನ್ನು ಸಹಸ್ರ ವ್ಯಕ್ತಿಗಳು ಹೊತ್ತಿದ್ದಾರೆ; ಕರಿಯ ವಸ್ತ್ರ ಧರಿಸಿದ ಅಸ್ಥಿಪಂಜರಗಳು ಮಾತ್ರ; ಒಂದಕ್ಕೂ ಜೀವವಿಲ್ಲ. ಸುತ್ತುಮುತ್ತಲೂ ಆರೇಳು ನೂರು ಎದೆ ಬಿರಿದ, ಜಡೆ ಹರಿದ, ತಾಯಂದಿರು. ಒಬ್ಬರೂ ಒಂದೊಂದು ಕೂಸನ್ನೆತ್ತಿಕೊಂಡಿದ್ದಾರೆ. ಆ ಕೂಸುಗಳು ಅಳುವುದಿಲ್ಲ. ಅದೋ! ಒಂದರ ಕಣ್ಣು ಹರಿದುಹೋಗಿದೆ. ಮತ್ತೊಂದರ ಮೆದುಳು ಹೊರ ಬಂದಿದೆ. ಮತ್ತೊಂದಕ್ಕೆ ಹೊಟ್ಟೆ ಇಲ್ಲ. ಕೈಯಿಲ್ಲದವು, ಕಾಲಿಲ್ಲದವು, ತಲೆಯಿಲ್ಲದವು! ಸುತ್ತುಮುತ್ತಲಿನ ಜನ ರಾಕ್ಷಸರಂತೆ ಕುಣಿಯುತ್ತ,

"ಸೈತಾನ! ಸೈತಾನ!" ಎಂತ ಛೀಳಿಡುತ್ತಾ ಶವದಾನಿಗೆ ಉಗುಳುತ್ತಿದ್ದಾರೆ. ಕಲ್ಲು ಮಣ್ಣು ಒಗೆಯುತ್ತಿದ್ದಾರೆ, ಮೆರವಣಿಗೆಯ ಮುಂದೆ ಬಲಗೈಯಲ್ಲಿ ಬಂದೂಕನ್ನೆತ್ತಿ ಹಿಡಿದು ಒಬ್ಬ ವ್ಯಕ್ತಿ ಮುಂದೆ ಸಾಗುತ್ತಿದ್ದಾನೆ. ಆತ ಎಲ್ಲರಿಗಿಂತಲೂ ಎತ್ತರ; ಭೀಮಕಾಯ; ಅಳ್ಳೆದೆಯನ್ನೂ ಝಲ್ಲೆನಿಸುವ ನಡಿಗೆ–ಆತ, ಆತ ಮೂರ್ತಿ! ಭೂಮಿ ನಡುಗುತ್ತಿದೆ. ಕಾರ್ಮೋಡದ ಕತ್ತಲೆ ಕವಿದಿದೆ. ಆಕಾಶ ಕಳಚಿ ಬೀಳುತ್ತಿದೆ. ಭೋ ಎನ್ನುವ ಭೀಕರ ಸ್ವರ ಕೋಟಿ ಕಂಠಗಳಿಂದ ಬಂದಂತೆ ಎಲ್ಲೆಡೆಗೂ ಪಸರಿಸುತ್ತಿದೆ....

xxx xxx xxx

ಮೂರ್ತಿ ಮತ್ತು ನಾನು ಕಣ್ಣು ತೆರೆದದ್ದು "ಮೈಸೂರು ಕಾಫಿ, ಹುಬ್ಬಳ್ಳಿ ಚಹಾ, ಎರಡೂ ರೆಡೀ" ಎಂದು ಬೆಳಿಗ್ಗೆ ಸುಧಾ ಗದ್ದಲವೆಬ್ಬಿಸಿದಾಗ........

........ಒತ್ತಾಯದಿಂದ ಕರೆದೊಯ್ದು ಮೂರ್ತಿಗೆ ಬಿಸಿನೀರಿನಿಂದ ಮೈ ತೊಳೆಸಿದೆ! ಆ ಗಾಯಕ್ಕೆ ಶುಭ್ರ ವಸ್ತ್ರದ ಬ್ಯಾಂಡೇಜು ಕಟ್ಟಿದೆ. ಅವನಿಗೆ ನನ್ನ ಷರಟು-ಷರಾಯಿ ತೊಡಿಸಿದೆ.

ಕೋಣೆಯ ತುಂಬ ನಾಲ್ಕಾರು ಬಾಂಧವರು ಬಂದು ನೆರೆದಿದ್ದರು. ಮೂರ್ತಿ ಅವರೆಡೆಯಲ್ಲಿ ಹೋಗಿ ಕುಳಿತ.

ಆತ ನಮ್ಮ ಪರಿಚಿತನಾಗಿದ್ದ "ಬಕ್ರಾ" ಮೂರ್ತಿಯಾಗಿರಲಿಲ್ಲ. ಅವನನ್ನು ನೋಡುತ್ತ ನೋಡುತ್ತ ನೂರೊಂದು ವಿಚಾರಗಳು ತಲೆಯೊಳಗೆ ಸುತ್ತುತಿದ್ದುವು. ನಗುನಗುತ್ತಲಿದ್ದ ಮೂರ್ತಿ ರುದ್ರ ಮೈಸೂರಿನ ಪ್ರತಿಮೂರ್ತಿಯಾಗಿದ್ದ.

ಮೌನ ಮುರಿದು ಮೂರ್ತಿ, "ಕಿಟ್ಟು ಸತ್ತು ಹೋದ" ಎಂದ.

ಸುಧಾನೇ ಪುನರುಚ್ಚಾರ ಮಾಡಿದಳು : "ಕಿಟ್ಟು ಸತ್ತುಹೋದ!?"

ಹೇಗೆ ಸತ್ತ? ಎಂದು ಯಾರೂ ಕೇಳಲಿಲ್ಲ. ಮೈಸೂರಿನಲ್ಲಿ ಈಗ ಕಾಹಿಲೆ ಬಿದ್ದು ಯಾರೂ ಸಾಯುವುದಿಲ್ಲ. ಮಕ್ಕಳಿರಲಿ, ವೃದ್ಧರಿರಲಿ, ಗಂಡಸರಿರಲಿ, ಹೆಂಗಸರಿರಲಿ—ಎಲ್ಲರೂ ಸಾಯುವುದೂ ಒಂದೇ ಹೊಡೆತದಿಂದ; ನಿರಂಕುಶ ದೈವದ ಪಾಶವೀ ಬಡೆತದಿಂದ. ಅದು ಬಂದೂಕಿರಬಹುದು,

ಬಯನೆಟಿರಬಹುದು, ಲಾಠಿಯಿರಬಹುದು, ದೊಣ್ಣೆ ಇರಬಹುದು. ವಿಧಾನ ದಲ್ಲಷ್ಟೇ ವಿವಿಧತೆ.

ಕಿಟ್ಟು, ಮೂರ್ತಿಯ ಸಣ್ಣ ತಮ್ಮ. ಲೋಯರ್‌ಸೆಕೆಂಡರಿ ಓದುತಿದ್ದ. ಹಿಂದೆ ಅವರ ಊರಿಗೆ ನಾನು ಹೋಗಿದ್ದಾಗ ಅವನ ಸಹವಾಸದಲ್ಲಿ ಕಳೆದ ಒಂದು ದಿನ ಆಗಾಗ ಕಣ್ಣಿಗೆ ಕಟ್ಟುತಿತ್ತು. ತಲೆಯಾಡಿಸಿ ನೀಳವಾದ ನುಣುಪು ಕ್ರಾಪನ್ನೆಲ್ಲ ಹಿಂದಕ್ಕೆ ಸರಿಸಿ, ಆ ಎಳೆಯ ಹೃಷ್ಟಪುಷ್ಟ ತೋಳನ್ನೆತ್ತಿ ಆತ "ಜಯಹಿಂದ್!" ಎಂದಾಗ ನೋಡುವವರ ಬಾಹುಗಳಲ್ಲಿ ಸ್ಫುರಣವೇಳುತಿತ್ತು; ನಮ್ಮ ದೇಶದ ಅಸಂಖ್ಯ ಹುತಾತ್ಮರ ಅಖಂಡ ಬಲಿದಾನ ಕಣ್ಣೆದುರು ನಿಲ್ಲುತಿತ್ತು.

ಆ ಕಿಟ್ಟು—

"ಮಿಲಿಟರಿಯವರು ಗುಂಡಿಕ್ಕಿ ಕೊಂದರು," ಎಂದ ಮೂರ್ತಿ.

ಶಾಂತ ಸರೋವರದ ನಡುವಿನ ಕಲ್ಲು ಬಂಡೆಯ ಹಾಗೆ ಕುಳಿತು, ಯಾವ ಆವೇಶವೂ ಇಲ್ಲದೆ ಮೂರ್ತಿ ಮಾತಾಡುತಿದ್ದ. ಆದರೆ ಆ ಮಾತು ಗಳೊ? ಚುಕ್ಕಾಣಿ ಮುರಿದ ನಾವೆಗಳು ಬಂಡೆಗಪ್ಪಳಿಸಿ ನುಚ್ಚು ನೂರಾದ ಹಾಗೆ ಸ್ಫೋಟಿಸಿ ಬರುತಿದ್ದುವು.

ಒಮ್ಮೆಲೆ ಮಾತು ಬಂದಂಥ ಮೂಕನಾಗಿದ್ದ ಮೂರ್ತಿ; ಗಂಗಾವತ ರಣವಾಗಿತ್ತು ಅವನ ಪಾಲಿಗೆ.

"ಕಿಟ್ಟು ತೀರಿಕೊಂಡ ಎನ್ನಬೇಡಿ. ಆತ ಮೈಸೂರಿನ ಕಿಟ್ಟು........ ಕಿಟ್ಟು ಒಬ್ಬನೇ ಎಂದು ತಿಳಿದುಕೊಂಡಿರಾ? ತಪ್ಪು........ಓ್ಓ! ಎಷ್ಟು ಜನ ಕಿಟ್ಟುಗಳು ನಮ್ಮಲ್ಲಿ! ಸೈತಾನನ ಪಾಲಿನ ಪೋಲಿ ಕಿಟ್ಟುಗಳು!

"ಹೀಗೆ ನಡೀತು ಆ ಘಟನೆ. 'ಜಯಶಂಕರ್' ಎಂತ ಮೈಸೂರ್ಗೆ ಹೋಗೋವರ್ಗೂ ಅರೆಸ್ಟೇ ಇಲ್ಲ—ಎಂತ ಸ್ವಲ್ಪ ಜನ ತಿಳಕೊಂಡಿದ್ದಾಗ್ಲೇನೇ ಸರ್ಕಾರದ ಹೊಡೆತ ಬಿತ್ತು. ಸೆಕ್ಯೂರಿಟಿ ಆಕ್ಟಂತೆ. ಎಪ್ಪತ್ತು ಲಕ್ಷ ಬೋರೇ ಗೌಡರ ಜೀವನಾನ ಅಲ್ಲ, ಅರಸೊತ್ತಿಗೇನ ಸೆಕ್ಯೂರ್ ಮಾಡೋದಿಕ್ಕೆ ಹೊರ ಟಿದ್ದ ಆಕ್ಟು! ಒಮ್ಮೆ ಬೀಸಿದ ಬಲೆಯೊಳಗೇನೇ ಮುಖಂಡರನ್ನೋವರೆಲ್ಲಾ ಸಿಕ್ಹಾಕೊಂಡ್ರು.

"ಆದರೆ ನಂ ಜನ ಎಂಥಾವರೂಂತ ತಿಳಕೊಂಡಿದೀರಾ? ನಮ್ಮ ಜನತೆ—ಯಾರು ಊಹಿಸೋದ್ಕೂ ಸಾಧ್ಯವಾಗಿರ್ಲ್ಲಿಲ್ಲ ಅದರ ಶಕ್ತೀನಾ! ಮುಖಂಡರಿಲ್ಲದ ಬೆಪ್ಪುಗ್ಳು ಕುರಿ ಮಂದೆ ಹಾಗೆ ಸ್ವಲ್ಪೊತ್ತು ಕಿರಿಚಾಡಬಹುದು—ಅಂತ ಭಾವಿಸ್ದವ್ರೂ ಇದ್ರು. ಆದರೆ ಕಂಡುಬಂದಿದ್ದೇನು?

"ಕಂಡು ಬಂದಿದ್ದು!

"ಆಂ-ಕಿಟ್ಟೂ ವಿಚಾರ ಹೇಳಿದ್ನೆ? ಅದೊಂದು ದೃಷ್ಟಾಂತ ಸಾಕು ಜನತೆಯ ಶಕ್ತೀನಾ ತಿಳಕೊಳ್ಳೋದ್ಕೆ.

"ನಿರಂಕುಶ ದೆವ್ವದ ಗಣಗಳು ಬೀದಿ ಬೀದೀಲೆಲ್ಲಾ ಸುತ್ತಾಕ್ತಿದ್ವು. ಸರಕಾರದ ಸೈತಾನ ಜನತೆಗೆ ಬೆದರಿ, ಪ್ರಾಣಭಯದಿಂದಲೇ ಕೆರಳಿ ಎದ್ದಿದ್ದ. ಆದರೆ ಜನ, ಸಿಂಹಗಳ ಹಾಗೆ ಹೋರಾಡಿದ್ರು—ಸಿಂಹಗಳೂ ಸಿಂಹಿಣಿಯರೂ ಮರಿ ಸಿಂಹಗಳೂ! ಬಂದೂಕಿಗೆ ಉತ್ತರ, ಇಟ್ಟಿಗೆ; ಗುಂಡಿನ ಮಳೆಗೆ ಕಲ್ಲಿನ ಮಳೆ; ಮಿಲಿಟರಿ ಟ್ರಕ್ಕಿಗೆ ಕಡಿದು ಹಾಕಿದ ಸಾಲು ಮರದ, ಉರುಳಿಸಿದ ವಿದ್ಯುತ್ ಕಂಬದ, ಬ್ಯಾರಿಕೇಡ್.

"ಬ್ಯಾರಿಕೇಡ್! ಫ್ರೆಂಚ್ ಕ್ರಾಂತಿ, ರಷ್ಯಾ ಕ್ರಾಂತಿ,—ಹೀಗೇ ಅಲ್ಲಿ ಆರಂಭವಾದದ್ದು?

"ಆ್ಹ! ಒಂದು ಹುಡುಗರ ಗುಂಪು ಕ್ರಾಸ್ ರೋಡಿನಲ್ಲಿ ನಿಂತಿತ್ತು. ಸಾತಂತ್ರ್ಯ ಬಾವುಟ ಹಿಡಿದು ಏನೋ ಬಾಕ್ಸಿನ ಮೇಲೆ ನಿಂತು ಲೆಕ್ಚರ್ ಹೊಡೀತಿದ್ದ ರಾಜಾ ಕಿಟ್ಟು. 'ಇಂಕ್ವಿಲಾಬ್ ಜಿಂದಾಬಾದ್!' ಎನ್ನುತಿದ್ದ. ಆ ತಂಡವೆಲ್ಲ ಅದೇ ರಣ ಗರ್ಜನೆ ಮಾಡ್ತಿತ್ತು.

"ನಾನಲ್ಲೇ ಮರದ ಮರೆಯಲ್ಲಿ ನಿಂತಿದ್ದೆ.

"ಒಂದು ಮಿಲಿಟರಿ ಲಾರಿ ಬಂದು ಅಲ್ಲೇ ಹಾಲ್ಟ್ ಆಯ್ತು. ಅವರ ಮುಖಂಡ ಕೂಗಾಡಿದ: 'ಗುಂಡು ಹಾರಿಸ್ತೀನಿ–ತಲೆ ಚೆಂಡಾಡ್ತೀನಿ.'

"ಗೊಳ್ಳೆಂದು ನಕ್ಕುವು ಹುಡುಗಮುಂಡೇವು. ನಾಲ್ಕು ಜನ ಸಿಪಾಯಿಗಳು ಕೆಳಕ್ಕೆ ಹಾರಿದ್ರು. ಹುಡುಗ್ರು ಒತ್ತಟ್ಟಿಗೆ ಸರಿದರು. ಲಾರಿಯ ಸುತ್ತೂ ಸಿಪಾಯಿಗಳ—ಮರಿ ಸಿಪಾಯಿಗಳ ಕಣ್ಣು ಮುಚ್ಚಾಲೆ ನಡೆಯಿತು.

“ನಮ್ಮ ಮರಿ ಸಿಪಾಯಿಗಳು! ಕಿಟ್ಟಿ ಅಲ್ಲೇ ನಿಂತು, ಚೀಯರಪ್ ಮಾಡುತಿದ್ದ : ‘ಮಿಲಿಟರಿಯವರೇ ಹೊರಟು ಹೋಗಿ; ಅರಸೊತ್ತಿಗೆ ಅಳಿಯಲಿ; ಇಂಕ್ವಿಲಾಬ್ ಜಿಂದಾಬಾದ್!’ ನಾಲ್ಕು ಮೂಲೆಗಳಿಂದ ಜನ ಧಾವಿಸಿ ಬಂದರು– ಎಂಥ ಸಮ್ಮರ್ದ! ಎಂಥ ಉತ್ಸಾಹ! ಎಂಥ ಕೋಲಾಹಲ!

“ಲಾರೀನ ಸುಡಿರಿ!—ಎಂದರು ಯಾರೋ. ಮೇಲೆ ನಿಂತಿದ್ದ ಮಿಲಿಟರಿ ಛೀಫ್ ಹಲ್ಲು ಕಡೀತಾ ಬಂದೂಕೆತ್ತಿದ. ಪಾಪಿ! ಆ ಪಾಪಿ ಕಿಟ್ಟಿಗೆ ಗುರಿಯಿಟ್ಟು ಹೊಡೆದ. ಗುರಿ ಹೊಡಿಯೋದರಲ್ಲಿ ನಿಷ್ಣಾತ ಆತ. ಎಂಥ ಗುರಿ! ಸುಂಯ್ ಎಂತ ಆ ಗುಂಡು ಕಿಟ್ಟಿಯ ಹೃದಯವನ್ನೇ ಭೇದಿಸಿ, ಹಿಂದಿದ್ದ ವಿದ್ಯುತ್ ಕಂಬಕ್ಕೆ ಡಣ್ ಎಂತ ಬಡಿದು, ನನ್ ಕೆಲಸ ಸಾಧಿಸಿದೀನಿ—ಅಂತ ಜಾಹೀರು ಮಾಡಿತು.

“ಆ ಮೇಲೆ ಒಂದು ರೌಂಡ್, ಎರಡು ರೌಂಡ್—ಮೂರನೇದು. ಅರಸೊತ್ತಿಗೆಯ ವಿರುದ್ಧ ಬಂಡಾಯವೆದ್ದ, ಅವಿಧೇಯತೆ ಪ್ರದರ್ಶಿಸಿದ, ಬುದ್ಧಿಗೇಡಿ ಜನರಿಗೆ. ಜನ ಓಡಿ ಹೋದರು ಎಂದಿರಾ? ಇಲ್ಲ ಸ್ವಾಮಿ........ ಟೈಗರ್ ಟಿಪ್ಪೂ ನಾಡಿನವರು ನಾವು. ಓಡ್ಹೋಗ್ತೀವೀಂತ ತಿಳಿದ್ರಾ? ಅವರು ಲಾರೀನ ಮುತ್ತಿದ್ರು. ಸಿಕ್ಕ ಸಿಪಾಯಿಗಳ್ನ ತುಂಬಿಸ್ಕೊಂಡು ಜನರ್ನ ಅಪ್ಪಚ್ಚಿ ಮಾಡ್ತಾ ಡ್ರೈವರ್ ಲಾರಿ ಓಡಿಸ್ದ.

“ನಾನು ಒಬ್ಬ ಸಿಪಾಯ್ನ ಹಿಡಿದಿದ್ದು ಆಗ. ಅವನ ಮೇಲೆ ನಾನು ಏರಿ ಹೋದಾಗ, ಬಯನೆಟಿಂದ ತಿವಿದ. ಆತನ ಬಂದೂಕಿನ ಗುಂಡು ತೀರಿದ್ವು. ಮುಷ್ಟಿಯಿಂದ ಗುದ್ದಿ ಅವನ ಮುಸುಡು ಒಡೆದ್ಹಾಕ್ದೆ. ಬಂದೂಕು—ಬಂದೂಕನ್ನು ಕಿತ್ಕೊಂಡೆ. ನನ್ನ ಮೈಮೇಲೊಂದು ರೇನ್ ಕೋಟಿತ್ತು. ಕಾಲಿಗ್ಬೀಳ್ತೀನಿ, ನಮ್ಮಪ್ಪಾ, ದ್ಯಾವ್ರು, ಬುದ್ಧೀ—ಎಂದ. ಅವನ್ನ ಜನರ ಕೈಗೆ ಕೊಟ್ಟೆ.

“ಒಂದಷ್ಟು ಜನ ಯುವಕರು ನಮ್ಮ ಕಿಟ್ಟೀನ ಎತ್ತಿ ಹಿಡಿದ್ರು. ಎಡಗೈಯಲ್ಲಿ ಗಟ್ಟಿಯಾಗಿ ಹಿಡಿದ ಬಾವುಟ, ಬಲಗೈಯ ಬಿಗಿಮುಷ್ಟಿ. ಮನ್ಮಥನ ಹಾಗಿದ್ದ! ಬಿಳಿಯ ಬಟ್ಟೆ ಮೇಲೆ ರಕ್ತದ ಯಮುನೆ ಲಲ್ಲೆ ಆಡಿದ್ಲು. ಹತ್ತಿರ ಹೋಗಿ ನಿಂತೆ. ಅವರು ಮೆರವಣಿಗೆ ಹೊರಡೋದ್ರಲ್ಲಿದ್ರು.

"ನಿಲ್ಲಿ!—ಎಂದೆ. ಅವರೆಲ್ಲ ನನ್ನನ್ನೇ ನೋಡಿದ್ರು. ಬಲಗೈ ಮುಂದೆ ಚಾಚಿ, ಇಲ್ನೋಡಿ ಮಗೂನಾ! ಎಂದೆ. ಒಬ್ಬರನ್ನೊಬ್ಬರು ಮುಖ ನೋಡಿದರು. ಇಲ್ನೋಡಿ-ಕಿಟ್ಟಿ ನನ್ನಮ್ಮ, ಎಂದೆ; ಅಮ್ಮನಿಗೆ, ನಮ್ಮ ಅಣ್ಣನಿಗೆ, ತೋರಿಸ್ಬರ್ತೀನಿ—ಎಂದು ಹೇಳಿದೆ. ಎದುರಿಗಿದ್ದವರು ತಮ್ಮ ಕಣ್ಣೊರೆಸಿಕೊಳ್ಳಲು ಕರವಸ್ತ್ರ........

"ಕಿಟ್ಟೀನ ಕರಕೊಂಡು ಬಂದೆ; ಕತ್ತಲೆಯಾಗಿತ್ತು.

"ರಣಭೂಮಿಗೆ ಹೋಗಿದ್ದ ವಿಜಯೀವೀರನನ್ನ ಎತ್ಕೊಂಡು ಬಂದೆ!

"ಅಣ್ಣ-ನಮ್ಮಣ್ಣ-ಮನೇಲಿರ್ಲಿಲ್ಲ. ಅವನ ಮುಷ್ಕರ ಶುರುವಾಗೋದಿತ್ತು ಆ ರಾತ್ರಿ. ನಮ್ಮಣ್ಣ ಗೂಡ್ಸ್ ಆಫೀಸಿನಲ್ಲಿ ಕ್ಲಾರ್ಕು........ಐದು ನಿಮಿಷ ಎದೆ ಬಡಕೊಂಡು ಹಣೆ ಹೊಡಕೊಂಡು ಆದ ಮೇಲೆ ತಾಯಿ ಮಹಾ ಮೌನದ ಪ್ರತಿಮೆಯಾದಳು.

"ಮುಷ್ಕರ ಆರಂಭವಾದ ಮೇಲೆ, ಸಂಸ್ಥಾನದ ೧೦,೦೦೦ ರೈಲ್ವೆ ಕೆಲಸಗಾರರೂನೂ ಹೋರಾಟಕ್ಕೆ ಧುಮುಕಿದ ಮೇಲೆ ದುಡಿತದ ಎಲ್ಲ ಆಯಾಸವನ್ನೂ ಮರೆತು ಶಿಳ್ಳು ಹಾಕುತ್ತಾ ಅಣ್ಣ ಬಂದ.

"ಅಣ್ಣ ಬಂದಾಗ ಮಗೂನ ಮೀಯಿಸಿ ಮಲಗಿಸಿದೆವು. ಸೈತಾನ ಬಡೆದಂತೆ ಅಣ್ಣ ನಿಶ್ಚೇಷ್ಟಿತನಾಗಿ ಹೋದ. ತಾಯಿ ಮುದ್ದಿಸಿದಳು. ಕಿಟ್ಟಿಯ ಗಂಟಲು ಗೊಳಕ್ಕಂದ ಹಾಗಾಯಿತಂತೆ. ಅಯ್ಯೋ! ಕಂದಮ್ಮ ಮಾತಾಡುತ್ತೆ ಕಣೋ!—ಎಂದಳು ನಮ್ಮಮ್ಮ.

"ಸುಮ್ಮನಿರು, ಇಂಕ್ವಿಲಾಬ್ ಘೋಷ ಪೂರ್ಣ ಮಾಡ್ದ ಅಷ್ಟೇನೇ—ಎಂದ ನಮ್ಮಣ್ಣ, ತನ್ನ ಮೌನ ಭೇದಿಸಿ........

xxx xxx xxx

—ಹೀಗೆ ಸಾಗಿತು. ಮೂರ್ತಿ ಹೇಳಿದ ಕತೆ.

ಮೈಸೂರಿನ ೭೦ ಲಕ್ಷ ಕನ್ನಡ ಕಲಿಗಳು ನಡೆಸಿರುವ ಅಸಮಾನ ಹೋರಾಟದ ಒಂದೊಂದು ಅಧ್ಯಾಯ—ಆ ಒಂದೊಂದು ಸನ್ನಿವೇಶ.

ಬಲಗೈಯಿಂದ ಎಡಭುಜವನ್ನು ಒತ್ತಿ ಹಿಡಿದು ಮೂರ್ತಿ ಮಾತು ಮುಂದುವರಿಸಿದ:

"ನಾವು ಬೇರೆ–ನೀವು ಬೇರೆ, ಮೈಸೂರು ಬೇರೆ–ಇನ್ನಿತರ ಕರ್ನಾಟಕ ಬೇರೆ, ಅಂತ ಮಾಡಿರೋರು ಯಾರು? ಸಾಮ್ರಾಜ್ಯಶಾಹಿಯಲ್ಲ. ನಂ ಯುದ್ಧ ನಿಂ ಯುದ್ಧಾನೆ. ನೀವು ಆಡುವ ಒಂದೊಂದು ಮಾತೂ ಮಾಡುವ ಒಂದೊಂದು ಕೃತಿಯೂ ತೂಗಿ ತೂಗಿ ಬರಲಿ. ನಂ ಸಂಸ್ಥಾನ ದಿಂದ ಈವಾಗ್ಲೇನೇ ಒಂದಷ್ಟು ಜನ ಇಲ್ಲಿಗೆ ಬಂದಿದಾರಂತೆ. ಪ್ರಾಂತಿಕ ಕಾಂಗ್ರೆಸ್ ಸಮಿತಿ ಆಫೀಸಿಗೆ ಹೋಗಿ ಅವರ್ನ ಕಾಣ್ತೇನಿ; ಕಮ್ಯೂನಿಸ್ಟ್ ಕಚೇರಿಗೆ ಹೋಗ್ತೀನಿ; ಸೋಶಿಯಲಿಸ್ಟರ್ನ ಕಾಣ್ತೇನಿ; ರೈಲ್ವೆ ಕೆಲಸ ಗಾರರ್ನ ಕೇಳ್ತೀನಿ—ನಮಗಾಗಿ ನಿಮ್ಮಿಂದ ಎಷ್ಟೋ ಆಗಬೇಕಾಗಿದೆ— ಎಷ್ಟೋ........"

xxx xxx xxx

ಊಟವಾದ ಮೇಲೆ ಗೆಳೆಯ ಡಾಕ್ಟರೊಬ್ಬರಲ್ಲಿಗೆ ಹೋದೆವು.

ಪ್ರತಿ ನಿಮಿಷವನ್ನೂ ಉಪಯೋಗಿಸಿ ಮೂರ್ತಿ ಊರೆಲ್ಲ ಸುತ್ತಾಡಿದ. ಹಲವಾರು ಜನರನ್ನು ಭೇಟಿ ಮಾಡಿದ.

ಆತ ಹೇಳುತಿದ್ದ:

"ಬರಿಯ ಬಂದೂಕಿಂದೇನು? ಕಾರ್ಟ್ರಿಜಸ್ ಬೇಕು; ಕಾರ್ಟ್ರಿಜಸ್!"

ಮರುದಿನ ಮಧ್ಯಾಹ್ನ ಸುಧಾ, ಮೂರ್ತಿಯನ್ನು ಬೀಳ್ಕೊಟ್ಟಳು.

ಮೂರ್ತಿ ಹೇಳಿದ:

"ಸುಧೀ, ನಂಗೊತ್ತು, ಹೊಟ್ಟೇಲಿ ಪುರುಷಸಿಂಹನನ್ನೋ ಸ್ತ್ರೀ ಸಿಂಹಿಣಿ ಯನ್ನೋ ಹೊತ್ತಿದ್ದೀಯಾ—ಜನತೆ ಕಟ್ಟುವ ಹೊಸ ಮೈಸೂರಿಗೆ ಕರ ಕೊಂಡು ಬಾ ಮಗೂನ, ಮಾವನ್ನ ತೋರಿಸೋದಿಕ್ಕೆ........"

"ನೀನು ನಗುನಗುತ್ತಾ "ಬಾಮ್ಮಾ" ಎನ್ನುವಷ್ಟೊತ್ತಿಗೆ ಬರ್ತೀನಿ"

—ಎಂದು ನನ್ನ ತಂಗಿ, ಹೆಮ್ಮೆಯ ಕಣ್ಣು ಹನಿಗಳನ್ನು ಹತ್ತಿಕ್ಕುತ್ತಾ ಉತ್ತರ ಕೊಟ್ಟಳು.

ಸಂಸ್ಥಾನದ ಗಡಿಯವರೆಗೆ-ಚಳಗೇರಿಯ ತನಕ-ನಾನೂ ಜತೆಯಲ್ಲೇ ಹೊರಟೆ. ಅಲ್ಲಿ ಸತ್ಯಾಗ್ರಹಿಗಳ ಶಿಬಿರಕ್ಕೆ ಹೋದೆವು. ಉತ್ತರ ಕರ್ನಾಟಕ ದಿಂದ ಯುವಕರ ತಂಡವೊಂದು ಮೈಸೂರು ಹೋರಾಟದಲ್ಲಿ ಭಾಗಿಯಾಗ ಲೆಂದು ಅಲ್ಲಿಗೆ ಬಂದಿತ್ತು.

XXX XXX XXX

ಮರುದಿನ ಅರುಣನ ಉದಯದ ಹೊತ್ತಿಗೆ ತುಂಗಭದ್ರೆಯ ದಂಡೆಗೆ ಬಂದೆವು.

ಅಂಧಕಾರದ ಸೈತಾನನನ್ನು ಮುಂಬೆಳಗಿನ ಮುಂಗಾವಲಿನ ಸೇನೆ ಓಡಿಸುತಿತ್ತು.

ಪೂಲಿನ ಮೇಲೆ ಮಿಲಿಟರಿಯ ಸರ್ಪಗಾವಲಿತ್ತು. ದೂರದಲ್ಲಿ ಆಳ ವಿಲ್ಲದ ಕಡೆ ಹೊಳೆ ದಾಟಿದೆವು.

ಬೀಳ್ಕೊಡುವ ಅಪ್ಪುಗೆಯಿಂದ ಬಿಡಿಸಿಕೊಂಡು ಮೂರ್ತಿ ಮಾತಾ ಡಿದ :

"ಈ ತುಂಬಿದ ಬಂದೂಕು. ಪೋಲೀ ಕಿಟ್ಟೇನ ಸುಟ್ಟುಹಾಕಿದ ಬಂದೂಕೇ ಸಿಗಬೇಕಿತ್ತು ಎನಿಸುತ್ತೆ ಒಮ್ಮೊಮ್ಮೆ .......ಆದರೆ ಇದಾದರೂ ಇದೆಯಲ್ಲ ........ಬಂದೂಕು ಹಾರಿಸೋದನ್ನ ಇನ್ನು ಕಲೀಬೇಕಷ್ಟೆ! ಆದರೆ ಇಷ್ಟು ಖಂಡಿತ–ಮೊದಲ ಗುಂಡೇ ಗುರಿ ತಾಕೀತು........!"

ಆತ್ಮವಿಶ್ವಾಸದ ನಗು ಸುಳಿದಂತಾಯಿತು ಆ ಮುಖದ ಮೇಲೆ.

ಬಿಗಿಮುಷ್ಟಿಯೆತ್ತಿ ವಂದಿಸುತ್ತಾ, "ಹೋಗು ಮೂರ್ತಿ. ಬೇಗನೆ ಇನ್ನೊಮ್ಮೆ ಕೂಡೋಣ" ಎಂದೆ.

ಮೂರ್ತಿ ಹೋದ.

ಹೆಜ್ಜೆಯ ಮೇಲೆ ಹೆಜ್ಜೆ ಇಟ್ಟು ತಲೆ ಎತ್ತಿ, ಎದೆಯೆತ್ತಿ, ಮೂರ್ತಿ ಹೋದ.

ಜೋತಾಡುತ್ತಲಿದ್ದ ಗಾಯಗೊಂಡ ಕೈ, ಕಂಕುಳಲ್ಲಿ ಬಂದೂಕು, ಮೈಮೇಲೆ ರೇನುಕೋಟು.

ಆತ ದೂರ ಹೋದಂತೆ ಹೊರ ಆಕಾರವಷ್ಟೆ ಕಾಣತೊಡಗಿದಾಗ ಆ ಕನಸಿನ ನೆನಪಾಯಿತು :

........ಸೈತಾನನ ಸ್ಮಶಾನ ಯಾತ್ರೆ ; ಮೆರವಣಿಗೆಯ ಮುಂದೆ ಎಚ್ಚೆತ್ತ ಸ್ವಾತಂತ್ರ್ಯ ಯೋಧ ; ಅವನಿಗೆ ಸೋಲಿಲ್ಲ ; ಆತ ಅಜೇಯ !

---

೨೮ ಸೆಪ್ಟೆಂಬರ್ ೧೯೪೭

# ನಂ. ೨೦೮ ಮತ್ತು ನೀಲಿ ಬುಶ್ ಕೋಟು

ಎರಡನೆಯ ಗಂಟೆ ಬಾರಿಸುವ ಹೊತ್ತಿಗೆ ಶಾರದಾ, ಎಂದಿನಂತೆ ಒಳ ಅಂಗಳವನ್ನು ಸೇರಿದ್ದಳು. ಮೂರನೆಯ ಗಂಟೆ ಬಾರಿಸಲು ಆಮೇಲೆ ಉಳಿದುದು ಐದೇ ನಿಮಿಷ.

ಗೇಟಿನ ಹೊರಗೆ ಮೇಜಿನ ಬಳಿ ಒಬ್ಬ ನಿಂತಿದ್ದ; ಇನ್ನೊಬ್ಬ ಕುಳಿತಿದ್ದ.

೪೬ನೆಯ ನಂಬರ್ ಹಾಜರಿಯಾಯಿತು.

"೨೦೮" ಎಂದಳು ಶಾರದಾ.

ಇಬ್ಬರೂ ಮುಖವೆತ್ತಿ ನೋಡಿ ನಕ್ಕರು. ಆಕೆಯೂ ಪ್ರತಿಯಾಗಿ ಮುಗುಳ್ನಕ್ಕಳು.

ಕುಳಿತಿದ್ದಾತ ಹಾಜರಿ ಬರೆದ; ನಿಂತಿದ್ದಾತ ಎದುರಿಗಿದ್ದ ಬೋರ್ಡಿನ ಮೇಲಿಂದ ೨೦೮ನೇ ನಂಬರಿನ ಬಿಲ್ಲೆಯನ್ನು ತಂದು ಟೇಬಲಿನ ಮೇಲಿರಿಸಿದ. ಕೈಗೆ ಕೊಡುವುದರಿಂದ ಬೆರಳಿಗೆ ಬೆರಳು ತಗಲಿ ಆಕಸ್ಮಿಕಗಳಾಗುತ್ತವೆ. ಆದಕ್ಕಾಗಿ ಮೇಜಿನ ಮೇಲೆಯೇ ಇಡಬೇಕೆಂದು ಯಜಮಾನರ ಆಜ್ಞೆಯಿತ್ತು.

ಅದನ್ನಾಕೆ ಮೇಜಿನ ಮೇಲಿಂದ ಎತ್ತಿಕೊಂಡಳು. ಗೇಟನ್ನು ಹಾದು, ಹೊಲಿಗೆಯ ಕಟ್ಟಡವಿದ್ದ ಕಡೆಗೆ ಸಾಗಿದಳು.

ಆಮೇಲೆ ಬೇರೊಂದು ನಂಬರ್.

ವಾರದಲ್ಲಿ ಆರು ದಿನ ಪ್ರತಿ ದಿವಸವೂ ಹೀಗೆಯೇ, ನಂಬರ್ ಹೇಳುವುದು; ಮುಗುಳ್ನಗುವುದು; ಟೇಬಲಿನ ಮೇಲಿಂದ ಬಿಲ್ಲೆ ಎತ್ತಿಕೊಳ್ಳುವುದು; ಒಳಕ್ಕೆ ಹೋಗುವುದು. ಮತ್ತೆ ಎಂಟರಿಂದ ಹನ್ನೆರಡರವರೆಗೆ; ಒಂದರಿಂದ ಐದರವರೆಗೆ....

....ಶಾರದೆ ನಾಲ್ಕನೆಯ ಫಾರ್ಮ್ ಓದಿದ ವಿದ್ಯಾವಂತೆ. ತನ್ನ ಬೆನ್ನಲ್ಲೇ ಅದೇ ತರಗತಿಗೆ ಬಂದ ತಮ್ಮನಿಗಾಗಿ ಶಾರದೆ ಹಾದಿ ಮಾಡಿ

ಕೊಟ್ಟಳು. ಮುಂದೆ ಓದಲಿಲ್ಲ. ಐವತ್ತು ರೂಪಾಯಿ ಸಂಪಾದನೆಯ ತಂದೆ, ಕಾಯಿಲೆಯವಳಾದ ತಾಯಿ, ಮಗಳ ಮದುವೆಗಾಗಿ ತುಂಬ ಚಡಪಡಿಸಿದರು. ಆ ಒಂದು ವರ್ಷ ಕೈ ಹಿಡಿಯುವ ಪುಣ್ಯಾತ್ಮ ಬರಲಿಲ್ಲ....

ಹಾಗೆ ಕಾಯುತ್ತ ಕಾಯುತ್ತ, ಮನೆಯ ಸಂಪಾದನೆಗೆ ಸಹಾಯವಾಗ ಲೆಂದು, ಶಾರದ ಹೊಲಿಗೆ ಕಲಿತಳು. ನೆರೆಮನೆಯವರ ಮಕ್ಕಳಿಗೆ ಪೋಷಾಕು ಹೊಲಿಯುವ ಸಿಂಪಿಗಳು ಆಕೆಯೇ. ಮಗಳಿಗಾಗಿ ಚಿಕ್ಕದೊಂದು ಸಿಂಗರ್ ಮೆಶೀನ್ ಕೊಳ್ಳಬೇಕೆಂದು ತಂದೆ ಪ್ರಯತ್ನಿಸಿದರು. ಆದರೆ ಕಂತಿನ ಮೇಲಿಂದ ಬಡವನಿಗೆ ಯಾವ ಅಂಗಡಿಯವರು ಕೊಡುವರು ? ಈ ರೀತಿ, ಮೆಶೀನಿನ ಯೋಚನೆಯನ್ನೇ ಅವರು ಬಿಟ್ಟುಕೊಟ್ಟರು.

ಆ ಮೇಲೆ ಉಗುಳು ನುಂಗಿಕೊಂಡು ಆಕೆಯ ತಂದೆ, ಮಗಳನ್ನು "ತಯಾರಿ ಪೋಷಾಕಿ"ನ ಚಿಕ್ಕ ಫ್ಯಾಕ್ಟರಿಯೊಂದರಲ್ಲಿ ಕೆಲಸಕ್ಕೆ ಸೇರಿಸಿದರು. ಬಡ ಬ್ರಾಹ್ಮಣರ ಹುಡುಗಿ ಶಾರದಾ ಕೂಲಿಕಾರಳಾದಳು.

ಆ ಕೆಲಸ ದೊರೆತದ್ದು ಇಪ್ಪತ್ತು ದಿನಗಳ ಹಿಂದೆ—ಮೇ ೧ನೆಯ ತಾರೀ ಕಿಗೆ. ಇನ್ನೂ ಹತ್ತು ದಿನ ದುಡಿದರೆ ಆಕೆಗೆ ಮೂವತ್ತೆರಡು ರೂಪಾಯಿ ಸಂಬಳ ಬರುವುದು.

ಆ ಮೂವತ್ತೆರಡರಿಂದ ಎಷ್ಟನ್ನೋ ಸಾಧಿಸಬಹುದಿತ್ತು. ಆದರೆ ಅಷ್ಟ ರಲ್ಲೇ ಆಕೆಯ ಸೋದರ ವಿಷಮಜ್ವರದಿಂದ ಹಾಸಿಗೆ ಹಿಡಿದ. ಸದ್ಯ ಪರೀಕ್ಷೆ ಮುಗಿದ ಮೇಲೆ ಆ ಕಾಯಿಲೆ ಬಂದಿತ್ತು. ಮುಂದಿನ ವರ್ಷ ಮ್ಯಾಟ್ರಿಕ್ ಓದುವ ಹುಡುಗ ಆತ. ಅದಾದ ಮೇಲೆ ಅವನು ಸಂಪಾದನೆ ಮಾಡಬೇಕು. ಬೇಗನೆ ಅವನಿಗೊಂದು ಹುಡುಗಿಯನ್ನು ತಂದಾದರೂ ಶಾರದೆಯನ್ನು ಇನ್ನೊ ಬ್ಬರ ಮನೆಗೆ ದಾಟಿಸಬೇಕು. ಅಂತೂ ಹುಡುಗ ಬೇಸಿಗೆಯ ರಜೆಯಲ್ಲೇ ಕಾಹಿಲೆ ಬಿದ್ದುದು ಒಳ್ಳೆಯದೇ ಆಯಿತು.

ಆದರೆ ಎಷ್ಟೊಂದು ಖರ್ಚು ! ದಿನಕ್ಕೆ ಎರಡು ರೂಪಾಯಿಯಾದರೂ ಬೇಕಿತ್ತು. ಹಾಗೆ ಆಸ್ಪತ್ರೆಯಲ್ಲಿ ಹದಿನೈದು ದಿವಸ ಎಂದರೆ ಒಟ್ಟು ವೆಚ್ಚ ಮೂವತ್ತು ರೂಪಾಯಿ ; ಜತೆಯಲ್ಲಿ ಜಟಕಾ ಬಾಡಿಗೆ ಇತ್ಯಾದಿ........ ಈ ತಿಂಗಳಲ್ಲೇ ಶಾರದೆಗೆ ಕೆಲಸ ಸಿಗದೆ ಹೋಗಿದ್ದರೆ ತುಂಬ ತೊಂದರೆ

ಯಾಗುತ್ತಿತ್ತು. ಹುಡುಗನ ಆಸ್ಥೆಕೆ ಮಾಡುವುದೂ ಸಾಧ್ಯವಾಗುತ್ತಿತ್ತೋ ಇಲ್ಲವೋ....

ಶಾರದೆಗೆ ತಮ್ಮನೆಂದರೆ ಬಲು ಪ್ರೀತಿ. ಆತನಿಗೂ ಅಷ್ಟೇ, ಅಕ್ಕನೆಂದ ರಾಯಿತು....ಫ್ಯಾಕ್ಟರಿ ಮುಗಿಸಿ ದಿನಾಲೂ ಸಂಜೆ ಆರರೊಳಗಾಗಿ ಶಾರದ ಆಸ್ಪತ್ರೆ ಸೇರುತ್ತಿದ್ದಳು. ಇತ್ತೀಚೆಗೆ ಸಾವಕಾಶವಾಗಿ ಗುಣಮುಖನಾಗುತ್ತಿದ್ದ ತಮ್ಮನ ಬಳಿ ಕುಳಿತು ಮುಂಗುರುಳು ನೇವರಿಸುತ್ತ, ನಗೆಮಾತಾಡುತ್ತ, ತಾಯಿ ತಂದ ಕಿತ್ತಳೆ ಹಣ್ಣಿನ ಒಂದರ್ಧ ತಮ್ಮನಿಗೆ ಕೊಟ್ಟು ಇನ್ನೊಂದರ್ಧ ತಾನು ತಿಂದು, ಕೊಂಚ ಹೊತ್ತು ಕಳೆಯುತ್ತಿದ್ದಳು. ಆಮೇಲೆ ಬೇಗ ಬೇಗನೆ ನಡೆದು, ಹೆಂಗಸರ ಓಡಾಟ ಬೀದಿಯಲ್ಲಿ ಇರುವಾಗಲೇ, ಚೆನ್ನಾಗಿ ಕತ್ತಲಾಗುವುದಕ್ಕೆ ಮುಂಚೆಯೇ, ಒಂದೂವರೆ ಮೈಲಿ ದೂರದ ಮನೆ ಸೇರು ತ್ತಿದ್ದಳು. ಆ ಮೇಲೆ ರಾತ್ರಿಯ ಅಡುಗೆ....

ಆಕೆಯ ಹಾಗೆಯೇ ಆಕೆಯ ತಮ್ಮನೂ ಸ್ಫುರದ್ರೂಪಿ. ಒಳ್ಳೆಯ ಬಟ್ಟೆಬರೆ ಹಾಕಿಕೊಂಡ ಆತನ ಹರೆಯದ ಹುಡುಗರನ್ನು ಬೀದಿಯಲ್ಲಿ ಕಂಡಾಗ, ಶಾರದೆಗೆ ತನ್ನ ತಮ್ಮನಿಗೂ ಇಂಥವೇ ಬಟ್ಟೆಗಳಿದ್ದರೆ....ಎಂದು ಆಸೆಯಾಗುತ್ತಿತ್ತು.

ತಮ್ಮನಿಗಾಗಿ ಅವರೆಗೆ ಕೋಟು ಹೊಲಿಸಿಯೇ ಇರಲಿಲ್ಲ. ಆದರೆ ಆ ವರ್ಷ ಬಿಸ್ನಿ ಬಟ್ಟೆಯ ಒಂದು ಪ್ಯಾಂಟನ್ನಷ್ಟೇ ಹೊಲಿಸಿತ್ತು. ಆದರೆ ಶರ ಟನ್ನು ಪ್ಯಾಂಟಿನೊಳಹಾಕಲು ಲಜ್ಜೆ ಆತನಿಗೆ. ಯಾವಾಗಲೂ ಹೊರಗೇ ಇಳಿಬಿಟ್ಟು ಶಾಲೆಗೆ ಹೋಗುತ್ತಿದ್ದ.

ಸಾಮಾನ್ಯವಾಗಿ, ಏನಾದರೂ ಬೇಕೆಂದು ಎಂದಿಗೂ ಕೇಳುವವನಲ್ಲ ಆತ. ತಿಂಗಳಿಗೊಮ್ಮೆ ಅಕ್ಕ ಮತ್ತು ತಮ್ಮ ಜತೆಯಾಗಿಯೇ ಸಿನೆಮಾ ನೋಡ ಹೋಗುತ್ತಿದ್ದರು. ಜತೆಯಾಗಿಯೇ ವಾರಕ್ಕೊಮ್ಮೆ ಒಂದೊಂದಾಣೆಯ ಹುರಿಗಾಳು ಕೊಳ್ಳುತ್ತಿದ್ದರು.

ಹೀಗಿದ್ದರೂ, ನೀಲಿ ಬುಶ್ ಕೋಟ್‌ನ ನೆನಪೊಂದು ಒಮ್ಮೆ ಅವರ ಜೀವನದೊಳಕ್ಕೆ ನುಸುಳಿಕೊಂಡಿತು. ಆ ದಿನ ಎದುರಿನ ಮಹಡಿಯ ಮನೆಯ ಚಂದ್ರಹಾಸ "ಲೋ ನಾಣಿ, ಬರ್ತೀಯೇನಯ್ಯಾ ಕೊಂಚ?" ಎಂದು ಕೂಗಿದ. ಹೊಲಿಸಿದ್ದ ಹೊಸ ಬಟ್ಟೆಗಳ ರಾಶಿಯನ್ನು ತೋರಿಸಿ ಮೆಚ್ಚುಗೆ ಪಡೆಯುವುದಕ್ಕಾಗಿ ಹಾಗೆ ಕರೆದಿದ್ದ.

ನಾಣಿ ವಾಪಸ್ಸು ಬಂದಾಗ ಶಾರದಾ ಕೇಳಿದಳು; "ಯಾತಕ್ಕಂತೆ ಬರ ಹೇಳಿದ್ದು ?"

"ಪ್ರದರ್ಶನ ನೋಡೋಕೆ...."

ಮೂರು ಜತೆ ಲಿನನ್ ಬುಶ್‌ಕೋಟು, ಪ್ಯಾಂಟುಗಳು ; ಎರಡು ಜತೆ ಉಣ್ಣೆ ಸೂಟುಗಳು, ಶರಟುಗಳು....

ಆ ಹಗಲೆಲ್ಲ ಅಕ್ಕ-ತಮ್ಮ ಒಬ್ಬರಿಗೊಬ್ಬರು ಮಾತಾಡದೆ ಮೌನವಾಗಿಯೇ ಇದ್ದರು.

ಆ ರಾತ್ರಿ "ಈ ಯುಗಾದಿಗೆ ನಿನಗೊಂದು ಉಡುಗೊರೆ ಕೊಡಬೇಕೂಂತಿದೀನಿ ನಾಣಿ", ಎಂದಳು ಶಾರದಾ.

"ಓಹ್ಹೋ !" ಎಂದು ನಾಣಿ ನಕ್ಕ.

"ಯಾವ ಬಣ್ಣಾನೋ ನಿಂಗೆ ಪ್ರೀತಿ....?"

"ನೀಲಿ ; ತೆಳುನೀಲಿ ; ಆಕಾಶನೀಲಿ—" ಮತ್ತೆ ಅಣಕದ ಆ ನಗು.

ಇಲ್ಲ; ಯುಗಾದಿಗೆ ಆ ಉಡುಗೊರೆ ಬರಲೇ ಇಲ್ಲ. ಒಂಭತ್ತೂವರೆ ರೂಪಾಯಿ ಎಲ್ಲಿಂದ ಜಮೆಯಾಗಬೇಕು ? ಉಗಾದಿ ಕಳೆದು ಹೋಯಿತು. ಉಡುಗೊರೆಯನ್ನೊಂದು ತಮಾಷೆಯಾಗಿಯೇ ಭಾವಿಸಿದ್ದ ನಾಣಿ, ಅಕ್ಕನನ್ನು ಅಣಕಿಸುತ್ತಲೇ ಇದ್ದ. ಆದರೆ ಆಕೆಗೆ ಅಸಹನೀಯ ವೇದನೆಯಾಗುತ್ತಿತ್ತು. ಆಕೆ ಅಸಹಾಯತೆಯ ಕಣ್ಣುಹನಿಯನ್ನು ಯಾರೂ ಕಾಣದಾಗ ಹರಿಯಗೊಟ್ಟಳು.

ಈಗ ಅದೇ ಪ್ರೀತಿಯ ಸೋದರ ಆಸ್ಪತ್ರೆಯ ಮಂಚದ ಮೇಲೆ ಮಲಗಿದ್ದಾನೆ. ಈಗ ಉಡುಗೊರೆಯನ್ನು ತಾನು ಕೊಡುವುದು ಸಾಧ್ಯವಾದರೆ ? ಓ, ಸಾಧ್ಯವಾದರೆ ?

ಆದರೆ ಹೇಗೆ ?

ಉದ್ದನೆಯ ಕಟ್ಟಡದಲ್ಲಿ ನೂರಾರು ಗಂಡಾಳುಗಳು ಒಮ್ಮೆಲೆ ಐವತ್ತು ಅರವತ್ತು ಪದರಿನ ಬಣ್ಣ ಬಣ್ಣದ ಬಟ್ಟೆಯ ಮೇಲೆ ವಿದ್ಯುತ್ ಕತ್ತರಿಯಂತ್ರವನ್ನು ಪ್ರಯೋಗಿಸುತ್ತಿದ್ದರು. ಇನ್ನೊಂದು ಉರುಳುಯಂತ್ರ ಬಟ್ಟೆಯನ್ನು ನೀಟಾಗಿ ಒಂದರ ಮೇಲೊಂದು ಹಾಸುತ್ತಿತ್ತು. ಸುಯ್ ಎಂದು ಸಂಗೀತ

ಧ್ವನಿ ಹೊರಡಿಸುತ್ತಿತ್ತು ವಿದ್ಯುತ್ ಯಂತ್ರ. ವಿವಿಧ ಆಕೃತಿಗಳ ಸಾಮೂಹಿಕ ಉತ್ಪನ್ನ-ನೂರು ನೂರರ ಸಂಖ್ಯೆಯಲ್ಲಿ. ಇನ್ನೊಂದೆಡೆ ಫ್ಯಾಷನ್ ರೂಮು. ಅಲ್ಲಿಂದ ಆಕೃತಿಗಳು ಬರುವುವು. ಮಕ್ಕಳಿಂದ ಮೊದಲಾಗಿ ಎಲ್ಲ ವಿಧದ ಪ್ರಾಯದವರಿಗೆ. ಒಳಚಡ್ಡಿಯಿಂದ ತೊಡಗಿ ಉಣ್ಣೆಯ ವೇಸ್ಟ್ ಕೋಟಿನವರೆಗೆ. ಬಲ ಮಗ್ಗುಲಲ್ಲಿ ಯಂತ್ರ ಹೊಲಿಗೆಯ ವಿಭಾಗ ; ಅದರಾಚೆ ಕೈ ಹೊಲಿಗೆಯ ಶಾಖೆ. ಶಾರದೆಯ ಹಾಗೆ ಮೂವತ್ತು ಹುಡುಗಿಯರು ಅಲ್ಲಿ ಕೂತಿದ್ದಾರೆ. ಹೊರವಠಾರದ ಕೊನೆಯಲ್ಲಿ 'ಇಸ್ತ್ರಿ' ಕೋಣೆ ಇದೆ........

ಶಾರದೆಗೆ ಬೇಕಾಗಿದ್ದುದು ಒಂದೇ ನೀಲಿ ಬುಶ್ ಕೋಟು.

ಸಣ್ಣ ಸೈಜಿನದು ; ಪೂರ್ಣ ತೋಳಿನದು....

ಕಣ್ಣೀರು ಒತ್ತರಿಸಿಕೊಂಡು ಬಂದ ಹಾಗಾಯಿತು ಆಕೆಗೆ....ಹುಬ್ಬು ಗಂಟಿಕ್ಕಿತು. ಎಲ್ಲರೂ ತನ್ನನ್ನೇ ನೋಡಿ ನಗುತ್ತಿರುವಂತೆ ಭಾಸವಾಯಿತು. ಆದರೆ ಅದು ಬರಿಯ ಭ್ರಮೆ.

....ಮತ್ತೆ ಯೋಚನೆಗಳು ಹರಿದವು....ತನ್ನ ಪ್ರೀತಿಯ ತಮ್ಮನಿಗಾಗಿ ಒಂದು ಬುಶ್ ಕೋಟು ಕೊಂಡುಕೊಳ್ಳುವ ಸಾಮರ್ಥ್ಯವಿಲ್ಲದೆ ಹೋಯಿತಲ್ಲ ತನಗೆ....

ಕೈ ಬೆರಳುಗಳು ಮಕ್ಕಳ ಗೌನುಗಳ ಅಂಗಿಗುಂಡಿಗಳನ್ನು ಹೊಲಿಯುತ್ತಿದ್ದವು....ಆದರೆ ಅದೆಲ್ಲವೂ ಯಾಂತ್ರಿಕವಾದೊಂದು ರೀತಿಯಲ್ಲಿ. ತಲೆ ಬಾಗಿಯೇ ಇತ್ತು. ಸೂಜಿ-ದಾರ ಒಳಹೊರಗೆ ಹೋಗಿ ಬರುತ್ತಲೇ ಇತ್ತು.... ಆದರೆ ಹೃದಯವನ್ನೇ ಹೊಕ್ಕು ಒಳ ಹೋಗಿ ಹೊರ ಬರುತ್ತಿದ್ದ ಸೂಜಿಯಂತೆ ನೋಯಿಸುತ್ತಲಿದ್ದ ಆ ವಿಚಾರಗಳೋ.

ಆಗದೆ ಉಳಿದು ಹೋದ ತನ್ನ ಮದುವೆ....ತಾನು ಕೂಲಿಕಾರಳಾದುದು ....ಹಾಗೆ ಕೆಲಸಕ್ಕೆ ಹೋಗುವುದರಿಂದ ತನಗಾಗಿ ಬರುವ ವರ–ಗಿರಾಕಿಗಳು ಕಡಿಮೆಯಾಗುವರಂತೆ. ಹೋಗದೆ ಇದ್ದರೆ ಮಾತ್ರ ?....ಉಪವಾಸ, ನಿಜಕ್ಕೂ ಎಷ್ಟು ಅಸಹನೀಯ !....

....ತನ್ನ ಸುತ್ತಮುತ್ತಲೂ ಕುಳಿತಿದ್ದ ಸಂಗಾತಿಗಳು....ಒಬ್ಬರದೂ ಒಂದೊಂದು ಕಥೆ. ಒಡೆದ ನೌಕೆಯ, ಭಗ್ನ ಮಂದಿರದ, ನೀಚ ಜೀವನದ,

ಆತ್ಮಹತ್ಯೆಯ ಆಲೋಚನೆಗಳ, ಕುಟುಂಬ ಪೋಷಣೆಯ, ವಿಧ ವಿಧದ ಕತೆಗಳು.

"ತಯಾರಿ ಪೋಷಾಕಿ"ನ ಆ ಫ್ಯಾಕ್ಟರಿಯಲ್ಲಿ ಹಿಂದೆ ಸಾವಿರ ಜನ ದುಡಿಯುತ್ತಿದ್ದರಂತೆ. ಆದರೆ ಈಗ ಮುನ್ನೂರೂ ಇಲ್ಲ. ಹೋದ ತಿಂಗಳಷ್ಟೇ ೮೦೦ ಜನರನ್ನು ವಜಾ ಮಾಡಿದರಂತೆ. ಆ ಮೇಲೆ ನೂರು ಜನ ಹೊಸಬರನ್ನು ಕಡಿಮೆ ಸಂಬಳದ ಮೇಲೆ ಕೆಲಸಕ್ಕೆ ಸೇರಿಸಿಕೊಂಡರಂತೆ. ಹಾಗೆ ಶಾರದೆಗೆ ಕೆಲಸ ಸಿಕ್ಕಿದ್ದು. ಯಾರ ತುತ್ತನ್ನೋ ಕಸಿದುಕೊಂಡು ತನಗೆ ಒಂದು ಚೂರು ನೀಡಿದ್ದಾರೆ....

....ಅದಕ್ಕೆ ಕಾರಣ, ಬೊಂಬಾಯಿಯ ಭಾರೀ ಮಿಲ್ಲುಗಳ ಹಿರಿ ಮಾಲಿಕರು ಬಟ್ಟೆ ಒದಗಿಸುವುದಿಲ್ಲವಂತೆ. ಸಾಲದ್ದಕ್ಕೆ ಅವರೇ ನಮ್ಮ ಊರಿಗೂ ಬಂದು ತಯಾರಿ ಪೋಷಾಕಿನ ಕಾರಖಾನೆ ತೆರೆಯುವರಂತೆ....

....ಹಾಗೆ ತೆರೆದಾಗ ಬೇರೆ ನೂರಿನ್ನೂರು ಜನರಿಗೋ ಹೆಚ್ಚು ಜನರಿಗೋ ಕೆಲಸ ಸಿಗಬಹುದು....ಸಂಬಳ ಕಡಿಮೆಯಾದರೂ ಸರಿ, ಕೆಲಸ ಸಿಗಬಹುದು....

ಆದರೆ ತನ್ನ ತಮ್ಮನಿಗೊಂದು ಬುಶ್‌ಕೋಟು. ಎಂಥ ಬಗೆ ಹರಿಯದ ಸಮಸ್ಯೆಯಾಯಿತಲ್ಲಾ !

ಮತ್ತೆ ಯೋಚನೆಗಳು....ವಿಷವೃತ್ತದ ಹಾಗೆ ಎಷ್ಟು ಸುತ್ತುವರಿದರೂ ಆ ಬಿಂದುವಿಗೇ ಬಂದು ತಲುಪುವ ಯೋಚನೆಗಳು....

ಯೋಚನೆ ಬಂದಾಗ ಮುಖ ಸಿಂಡರಿಸಿಕೊಂಡು ಕಪ್ಪಿಟ್ಟಿತು. ಪುನಃ ಹುಬ್ಬು ಗಂಟಿಕ್ಕಿತು....

ವಿರಾಮ ವೇಳೆಯಲ್ಲಿ "ಬುತ್ತಿ"ಗಳನ್ನೆತ್ತಿಕೊಂಡು ಎಲ್ಲರೂ ಕ್ಯಾಂಟೀನಿನ ಪಕ್ಕದಲ್ಲಿದ್ದ ಮಠಾರಕ್ಕೆ ಹೋದರು....

ಸಾರು—ಮಜ್ಜಿಗೆಯಲ್ಲಿ ಕಲಿಸಿದ್ದ ಒಂದು ತುತ್ತು ಅನ್ನವನ್ನು ಗಬಗಬನೆ ನುಂಗಿ, ಕೊಳಾಯಿಯಿಂದ ನೀರು ಕುಡಿದು ಶಾರದಾ ಹೊಲಿಗೆಯ ಕೋಣೆಯೊಳಕ್ಕೆ ಧಾವಿಸಿದಳು. ನೇರವಾಗಿ ಬರುವ ಬದಲು ಎಡಬದಿಯಿಂದ ಹಾದು ಬಂದಳು... ವಿವಿಧ ಪೋಷಾಕುಗಳು ಯಂತ್ರ ಹೊಲಿಗೆಯನ್ನು ಮುಗಿಸಿ ಕೈ ಹೊಲಿಗೆಯ ಸ್ಪರ್ಶಕ್ಕಾಗಿ ಕಾದು ಕುಳಿತಿದ್ದುವು. ಒಂದಕ್ಕೊಂದು ಸಮೀಪ

ವಾಗಿ ಆ ರಾಶಿಗಳು ವಿರಮಿಸುತ್ತಿವೆ. ಒಂದಕ್ಕೊಂದು ಸಮೀಪವಾಗಿ ಬರಿಯ ಕುರ್ಚಿಗಳು ನಿದ್ರಿಸುತ್ತಿವೆ.

....ಒಂದು ಕ್ಷಣ ಶಾರದಾ ಹಿಂತಿರುಗಿ ನೋಡಿದಳು. ಶರೀರ ಕಂಪಿಸಿತು ; ಮೈ ಬೆವತಿತು ; ಚಿಟ್ ಚಿಟ್ಟೆಂದು ಮೆದುಳು ಸಿಡಿಯತೊಡಗಿತು ; ಎದೆ ಗುಂಡಿಗೆ ಮೈಲು ದೂರಕ್ಕೂ ಕೇಳಿಸುವಂತೆ ಡವಡವಿಸಿತು........

ಆದರೆ ಕಣ್ಣುಗಳು ಕೆಲಸ ನಡೆಸಿದ್ದವು....ದೃಷ್ಟಿ ಆ ರಾಶಿಯ ಮೇಲೆಯೇ ಕೇಂದ್ರೀಕರಿಸಿತು. ಅದರಲ್ಲಿದ್ದ ಸರಿಯಾದ ಸೈಜಿನ ಆ ನೀಲಿ........

ಕೈಗಳು ಕಳ್ಳತನ ಮಾಡಿದವು. ಆ ಅರೆಹೊಲಿದ ನೀಲಿ ಲಿನನ್ ಬುಶ್‌ಕೋಟು ಮುದುಡಿ ಮುದುಡಿ ಆಕೆಯ ಪುಟ್ಟ ಟಿಫಿನ್‌ಕ್ಯಾರಿಯರಿನೊಳಗೆ ಅವಿತುಕೊಂಡಿತು............ಕುಸಿದು ಬೀಳುವ ಹಾಗಾಯಿತು ಆಕೆಗೆ ; ಕಾಲುಗಳು ಬಲಹೀನವಾದುವು. ಅಂತೂ ತನ್ನ ಸ್ಥಾನವನ್ನಾಕೆ ಸೇರಿದಳು........

ಸ್ವಲ್ಪ ಹೊತ್ತಿನಲ್ಲೇ ಇತರರೂ ಬಂದರು.

"ಮೈ ಚೆನ್ನಾಗಿಲ್ಲವೇ ?" ಎಂದಳು ಪಕ್ಕದಲ್ಲಿ ಇದ್ದಾಕೆ.

"ಹೂಂ...."

"ಹೊಟ್ಟೆ ನೋವೆ ?"

"ಹೂಂ...."

ಶಾರದೆಯ ಹಣೆಯನ್ನು ಮುಟ್ಟಿದಳಾಕೆ.

"ಅಯ್ಯೊ-ಬೆಚ್ಚಗಿದೆಯಲ್ಲ...."

"ಹೂಂ...."

ನಾಲ್ಕು ಗಂಟೆಯೊಳಗಾಗಿ, ನಡೆದಿದ್ದ ಘಟನೆ ತಿಳಿದು ಹೋಗುವುದು. ಆಮೇಲೆ ಒಬ್ಬೊಬ್ಬರನ್ನೂ ಶೋಧಿಸುವರು. ಪತ್ತೆಯಾಗುವುದು.

....ಹೇಗಾದರೂ ಮಾಡಿ ಅದಕ್ಕಿಂತ ಮುಂಚೆ ಹೊರಟುಹೋಗಬೇಕು.

ಕೈಯಿಂದ ಕೆಲಸ ಸಾಗಲೇ ಇಲ್ಲ.

ಮೇಸ್ತ್ರಿಣಿ ಬಂದಾಗ, ಪಕ್ಕದಲ್ಲಿದ್ದಾಕೆ ಎದ್ದು ನಿಂತು ಹೇಳಿದಳು. "ಶಾರದಮ್ಮನಿಗೆ ಬವಳಿ ಬರ್ತಾ ಇದೆ."

"ಸರಿ !" ಎಂದಳು ಮೇಸ್ತ್ರಿಣಿ, ತಿಳುವಳಿಕೆಯ ಮುಗುಳ್ನಕ್ಕು. ಬವಳಿ

ಬರುವುದಕ್ಕೂ ಯೌವನಕ್ಕೂ ಯಾವಾಗಲೂ ಸಂಬಂಧ ಇದ್ದೇ ಇದೆ ಎನ್ನು ವುದು ಆಕೆಯ ದೃಢ ಅಭಿಪ್ರಾಯ....

ಆಕೆ ತೀರ್ಪು ಕೊಟ್ಟಳು. "ಮೂರು ಗಂಟೆ ಈಗ....ಹೋಗಿಬಿಡು ಅರ್ಧ ದಿನ ಲೀವ್ ಹಾಕಿಸ್ತೀನಿ....ಬಿಲ್ಲೆ ಕೊಟ್ಟುಬಿಟ್ಟು ಹೊರಟ್ಹೋಗು."

ಬಿಲ್ಲೆಯನ್ನು ಕೊಟ್ಟು ಟಿಫಿನ್‌ಕ್ಯಾರಿಯರಿನೊಡನೆ ಶಾರದಾ ಹೊರಟಳು ....ಹಾಗೂ ಹೀಗೂ ಕಾಲುಗಳು ಗೇಟನ್ನು ದಾಟಿದವು.

ಮುಂದೆ ಎಲ್ಲಿಗೆ ಹೋಗಬೇಕು ? ಆಸ್ಪತ್ರೆಗೆ ? ಇಷ್ಟು ಬೇಗನೆ ? ಅಥವಾ ಮನೆಗೆ ? ಅದೂ ಇಷ್ಟು ಬೇಗನೆ ? ಏನೆಂದು ಉತ್ತರ ಕೊಡಬೇಕು ? ಏನೆಂದು ?

....ಅಯ್ಯೋ ! ಅಮ್ಮಾ... ಅಪ್ಪಾ ! ಓ ನಾಣೀ !

ಆಗ ನಿಜವಾಗಿ ಬವಳಿ ಬಂದ ಹಾಗಾಯಿತು. ಬೀದಿಯ ಬಳಿಯಲ್ಲೇ ಒಂದು ಕ್ಷಣ ಆಕೆ ನಿಂತಳು. ಕಾಲುಗಳು ಥರಥರನೆ ಕಂಪಿಸಿದುವು. ಮುಖವೆಲ್ಲ ಬಿಳುಚಿಕೊಂಡಿತು. ಕಣ್ಣೀರು ಕೋಡಿ ಕಟ್ಟಿ ಹರಿಯಿತು.

....ಬೀದಿಯಲ್ಲಿ ಹಾದುಹೋಗುತ್ತಿದ್ದವರು ಆಕೆಯನ್ನು ನೋಡತೊಡ ಗಿದರು....

ಅಯ್ಯೋ....ತಾನು ಮಾಡಿದ್ದೇನು ! ಏನನ್ನು ಮಾಡಿಬಿಟ್ಟೆ ?

ಇದಕ್ಕೆ ಪರಿಹಾರ ? ಮುಂದೆ ? ಅಪ್ಪ ಅಮ್ಮನಿಗೆ ಗೊತ್ತಾದರೆ ? ನಾಣಿಗೆ ಗೊತ್ತಾದರೆ ?

ಮುಂದೆಯೂ ಹೋಗಲಿಲ್ಲ, ಹಿಂದೆಯೂ ಹೋಗಲಿಲ್ಲ.......ನಿಂತಲ್ಲೇ ನಿಂತಳು ಆಕೆ........

ಎರಡು ಕ್ಷಣ ಹಾಗೆಯೇ; ಆಮೇಲೆ ಆಕೆ ಹಿಂತಿರುಗಿ ಫ್ಯಾಕ್ಟರಿಯತ್ತ ನಡೆದಳು....ಹೊರಅಂಗಣದ ಬಲ ಪಾರ್ಶ್ವದಲ್ಲಿದೆ ಯಜಮಾನರ ಆಫೀಸು. ಮಾಮೂಲಿನಂತೆ ಅವರೊಬ್ಬರೇ ಇದ್ದರು. ಇಳಿವಯಸ್ಸಿನ ನರೆಗೂದಲಿನ, ತೋರಿಕೆಗೆ ದಯಾಪೂರಿತವೆಂದು ಕಾಣುತ್ತಿದ್ದ ಕಣ್ಣುಗಳ, ಹಿರಿಯ ಆತ.

ಯಾವ ಸಾಹಸದಿಂದಲೋ ಏನೋ ಬಾಗಿಲನ್ನು ತಳ್ಳಿ ಶಾರದಾ ಒಳ ಹೋಗಿ ಅಲ್ಲೇ ನಿಂತಳು. ಕೆಲಸ ಕೇಳಿಕೊಂಡು ಬಂದ ಮೇಲೆ ಯಜಮಾನರ ಮುಂದೆ ನಿಂತುದು ಇದೇ ಎರಡನೆ ಸಾರಿ.

ತಮ್ಮ ಫ್ಯಾಕ್ಟರಿಯಲ್ಲಿ ಕೆಲಸ ಮಾಡುವಾಕೆಯೇ ಇರಬೇಕೆಂದು ಗೊತ್ತಿದ್ದರೂ ಅವರು ಕೇಳಿದರು:

"ಯಾರಮ್ಮ ನೀನು ? ಕುಳಿತ್ಕೋ........"

ಶಾರದೆ ಮಾತಾಡಲಿಲ್ಲ; ಮಾತು ಬರಲಿಲ್ಲ........

"ಏನಮ್ಮ ಸಮಾಚಾರ ?"

ಶಾರದೆ ಸಮಾಚಾರ ಹೇಳಲಿಲ್ಲ. ಉತ್ತರವಾಗಿ ಆಕೆ ಬಿಕ್ಕಿ ಬಿಕ್ಕಿ ಅತ್ತಳು.

ಫ್ಯಾಕ್ಟರಿಯೊಳಗೆ ಯಾರೋ ಆಕೆಯನ್ನು ಅವಮಾನಿಸಿರಬೇಕು—ಎಂದುಕೊಂಡರು ಯಜಮಾನರು. ಹಾಗಾಗುವುದೊಂದು ಅಸಾಧಾರಣ ಸಂಗತಿಯಾಗಿರಲಿಲ್ಲ.

ಒಂದು ಕ್ಷಣ ಯಜಮಾನರು ಸುಮ್ಮನಿದ್ದರು.

ಆಮೇಲೆ ಧ್ವನಿ ಏರಿಸಿ ಕೇಳಿದರು :

"ಏನಿದು ? ಏನು ಹೇಳು ?"

ಶಾರದೆಯ ನಡುಗುತ್ತಿದ್ದ ಕೈ ಬೆರಳುಗಳು ಟಿಫಿನ್‌ಕ್ಯಾರಿಯರನ್ನು ತೆರೆದುವು. ನೀಲಿ ಬುಶ್‌ಕೋಟು ಹೊರ ಬಂದು ತನ್ನ ಯಜಮಾನನ ಎದುರಲ್ಲಿ ಬಿದ್ದಿತು.

ಬೆರಗುಗಣ್ಣಿನಿಂದ ಅವರು ಅದನ್ನೇ ನೋಡಿದರು........

ಮರುಕ್ಷಣದಲ್ಲಿ ಅವರಿಗೆ ಅರ್ಥವಾಯಿತು. ಹುಬ್ಬು ಹಾರಿಸಿ ಕಿರಿಚಿಕೊಳ್ಳಬೇಕೆಂದು ಅವರಿಗೆನಿಸಿತು. ಆದರೆ ವಿಚಾರ ಬದಲಿಸಿ, ಮೇಲಕ್ಕೆದ್ದು, ಆಕೆಯ ಬೆನ್ನು ತಡವಿ, ಕುರ್ಚಿಯ ಮೇಲೆ ಕುಳ್ಳಿರಿಸಿದರು.

"ಹೆದರಬೇಡವಮ್ಮ........ನಿನಗೇನೂ ಮಾಡೋದಿಲ್ಲ. ಯಾರಿಗೂ ಹೇಳೋದಿಲ್ಲ........"

ಯಾವುದೋ ಅಭಯದ ಮಾತುಗಳು.

"ಯಾಕೆ, ಬುಶ್ ಕೋಟು ನಿನಗೆ ಬೇಕಾಗಿತ್ತೆ ?"

ಆ ಪ್ರಶ್ನೆಗೆ ಉತ್ತರವೆನ್ನುವುದು ಅವಳ ಬಾಳಿನ ಕಥೆಯೇ. ಅದನ್ನು ಹೇಳುವುದುಂಟೆ ? ಹೇಳಿ ಪೂರೈಸುವುದುಂಟೆ ?

"ಯಾರ ಮನೆಯವಳಮ್ಮ ನೀನು ?"

ಅಯ್ಯೋ.... ...ಇನ್ನು ತನ್ನ ಪಿತ್ರ ತಂದೆಯ ಹೆಸರನ್ನೂ ಹೇಳಬೇಕೆ ?

ಯಜಮಾನರಿಗೆ ತನ್ನ ಬಾಲ್ಯದ ನೆನಪಾಯಿತು. ಒಂದು ಕಾಲದಲ್ಲಿ ಅವರೂ ಕಹಿ ಜೀವನ ಅನುಭವಿಸುತ್ತಿದ್ದರು. ಬಡತನ, ಅವರ ತಮ್ಮನೊಬ್ಬ ನನ್ನು "ಅನೀತಿ" ಎನ್ನಿಸಿಕೊಳ್ಳುವ ಜಾರುಗುಂಡಿಯಲ್ಲಿ ಬಹಳ ಆಳಕ್ಕೆ ತಳ್ಳಿತ್ತು. ಆ ಪ್ರಪಾತದಿಂದ ಆತ ಮತ್ತೆ ಚೇತರಿಸಿಕೊಂಡು ಎದ್ದೇ ಇರಲಿಲ್ಲ.

ಮಾರಾಟಮಾಡಿ ಹಣ ಸಂಪಾದಿಸುವುದಕ್ಕೆಂದೇನೂ ಆಕೆ ಕದ್ದಿರಲಾರಳು. ಅಂಥವರು ಈ ರೀತಿ ಮನಸ್ಸಿನೊಳಗೆ ಹೊಯ್ದಾಡುತ್ತಾರೆಯೆ ?—ಎಂದೆಲ್ಲ ಯೋಚಿಸುತ್ತ ಯಜಮಾನರು ಮತ್ತೊಂದು ಮಾತು ಕೇಳಿದರು :

"ತಮ್ಮ ಇದಾನೇನಮ್ಮ ನಿನಗೆ ?"

ತಮ್ಮ—ಎಂದಾಗ ಆಕೆ ತಲೆ ಎತ್ತಿ ನೋಡಿದಳು.

"ಹೂಂ........"

"ಮನೇಲಿದ್ದಾನೆಯೆ ?"

"ಆಸ್ಪತ್ರೇಲಿ........"

"ಓ.........!"

ಯಜಮಾನರಿಗೆ ವಿಷಯ ಸ್ಪಷ್ಟವಾಗುತ್ತಾ ಬಂತು........

"ಅವನಿಗೋಸ್ಕರ ಎಂತ ತಗೊಂಡಿಯಾ...."

ಹೌದು—ಎನ್ನುವಂತೆ ನೀರು ತುಂಬಿದ್ದ ಶುಭ್ರ ಕಣ್ಣುಗಳೆರಡು ಅವರನ್ನೇ ನೋಡಿದವು.

"ತಿಳೀತು ಮಗೂ....ನನ್ನ ಕೇಳಿದ್ರೆ ಕೊಡ್ತಿದ್ನೆಲ್ಲಾ"

ಅದೇನೋ ನಿಜವಾಗಿರಲಿಲ್ಲ. ಆದರೂ ಯಜಮಾನರ ಬಾಯಿಂದ ಆ ಮಾತು ಬಂತು.

"ಎಷ್ಟಮ್ಮಾ ಸಂಬಳ ನಿನಗೆ ?"

"....ಮೂವತ್ತೆರಡು"

ಯಜಮಾನರು ಪರ್ಸ್ ತೆರೆದು, ಹತ್ತರ ಮೂರು ನೋಟು, ಎರಡರ ಒಂದು ನೋಟು, ಹೊರ ತೆಗೆದರು. ಸಾಮಾನ್ಯವಾಗಿ ಅಂಥ ಸಂದರ್ಭಗಳಲ್ಲಿ ಕೆಲಸದಿಂದಲೇ ವಜಾ ಆಗುವುದು. ಎಲ್ಲರೆದುರಲ್ಲಿ ಛೀಮಾರಿಯಾಗುವುದು. ಆದರೆ ಈ ಸಲ ಅವರು ಸಂಬಳ ಕೊಟ್ಟರು. ಅಷ್ಟೇ ಅಲ್ಲ........

"ನಿನ್ನ ಹೆಸರೇನಮ್ಮ ?" ಎಂದರು.

ತನ್ನ ಕೆಲಸ ಹೋಯಿತೆಂದು ಭಾವಿಸಿದ ಆಕೆ, "ಶಾರದಾ" ಎಂದಳು.

"ಇಲ್ನೋಡಮ್ಮ ಶಾರದಾ. ನನಗೆ ತುಂಬಾ ಸಾಲವಾಗಿದೆ. ನನ್ನಂಥ ಪುಟ್ಟ ಮಾಲೀಕರು ಯಾರೂ ಬದುಕೋ ಹಾಗೇ ಇಲ್ಲ. ಬೊಂಬಾಯಿಯ ಮಲಾಮಲ್ ಮಿಲ್ಸಿನ ಮಾರವಾಡಿಯೊಬ್ಬರಿಗೆ ಇದನ್ನು ಈ ವಾರದೊಳಗೆ ಮಾರ್ತೀನಿ....ಮುಂದೆ ನಿಮಗೆಲ್ಲಾ ಸಂಬಳ ಕೊಡೋವ್ನು ನಾನಲ್ಲ....ಈಗ ನಡೆದಿದ್ದನ್ನ ಯಾರಿಗೂ ನಾನು ಹೇಳಲ್ಲ....ನಾಳೆ ಕೆಲಸಕ್ಕೆ ಬಾ....ಏನೂ ಆಗೇ ಇಲ್ಲಾಂತ ತಿಳಕೊಂಡು ಬಾ....ಬರದೇ ಹೋದರೆ ನನಗೆ ದುಃಖ ವಾದೀತು........ಒಳ್ಳೇದು ಹೋಗಮ್ಮ ಹೋಗು........ಇಡೀ ತಿಂಗಳ ಸಂಬಳ ಕೊಟ್ಟಿದೀನಿ........ಆಸ್ಪತ್ರೆ ಖರ್ಚಿಗಾಗುತ್ತೆ........ಹೋಗು ಮಗೂ—"

ಸೆರಗಿನಿಂದ ಕಣ್ಣೊರಸಿಕೊಂಡು ಶಾರದಾ ಹೊರಟು ಹೋದಳು.

ಕ್ರಮ ಪ್ರಕಾರವಾಗಿ ನಾಲ್ಕು ಗಂಟೆಗೆ ಕಳವಿನ ವರದಿ ಬಂತು. ಯಜಮಾನರು ಸ್ವತಃ ಕೈ ಹೊಲಿಗೆಯ ಕೋಣೆಗೆ ಹೋದರು. ದುಡಿಯುತ್ತಿದ್ದ ಹೆಂಗಸರೆಲ್ಲ ಎದ್ದು ನಿಂತರು.

ಯಜಮಾನರು "ಯಾವುದು ಶಾರ್ಟ್ ಬಂದಿರೋದು—ಬುಶ್‌ಕೋಟೆ?" ಎಂದು ಕೇಳಿದರು.

"ಹೌದು ಸಾರ್, ಏಳಿತ್ತು—ಈಗ ಆರೇ ಇವೆ"

"ಸರಿ ಸರಿಯಾಗಿಯೇ ಇವೆ. ಮೆಶಿನ್ ರೂಮಿಂದ ನಾನು ಕಳಿಸಿದ್ದೇ ಆರು"

ಈ ತೀರ್ಪು ಕೇಳಿ ಹೆಂಗಸರು ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು. 'ಕಳವಿನ' ವಿಚಾರಣೆಯಲ್ಲಿ ತನ್ನ ಹಿರಿತನ ತೋರಿಸಲು ಅವಕಾಶವಿಲ್ಲದೆ ಹೋಯಿತಲ್ಲಾ—ಎಂದು ಮೇಸ್ತ್ರಿಣಿ ಮರುಗಿದಳು.

ಶಾರದಾ ಆಸ್ಪತ್ರೆಗೆ ಹೋದಳು ; ಅಲ್ಲಿಂದ ಮನೆಗೆ ಹೋದಳು.

ಮರುದಿನ, ಮೈ ಚೆನ್ನಾಗಿಲ್ಲವೆಂದು ರಜಾ ಅರ್ಜಿ ಬರೆದಳು.

ನಂಬರ್ ೨೦೮, ಆಮೇಲೆ ಆ ಫ್ಯಾಕ್ಟರಿಗೆ ಕೆಲಸಕ್ಕೆ ಹೊಗಲಿಲ್ಲ........

ಆ ಫ್ಯಾಕ್ಟರಿಯೇ ಆ ತಿಂಗಳ ಕೊನೆಯಲ್ಲಿ ಮುಚ್ಚಿಕೊಂಡಿತು.

ಶಾರದೆಯ ತಂದೆ ಮಗಳಿಗಾಗಿ ಬೇರೆ ಕಡೆ ಕೆಲಸ ಹುಡುಕತೊಡಗಿದರು.

ಆಸ್ಪತ್ರೆಯಿಂದ ಹೊರಬಿದ್ದ ನಾಣಿಗೆ, ಬಿಳಿಯ ಶುಭ್ರತೆಯ ಹುಚ್ಚು ಹಿಡಿದಿತ್ತು.

ಅವನ ರುಚಿ ಬದಲಾಗಿತ್ತು. ನೀಲಿಯಲ್ಲ—ಬಿಳಿ ಆತನಿಗೆ ಪ್ರಿಯ ವೆಂದು ತೋರಿತು.

ಒಂದು ದಿನ ಶಾರದಾ ಕೇಳಿದಳು :

"ನಾಣಿ....ಅಪ್ಪ ಹನ್ನೆರಡು ರೂಪಾಯಿ ನನ್ನ ಕೈಲೇ ಬಿಟ್ಟಿದ್ದಾರೆ. ಯಾವ ಬಟ್ಟೆ ಹೊಲಿಸೋಣ ನಿಂಗೆ ?"

"ಹನ್ನೆರಡು ಎಲ್ಲಿ ಸಾಕಾಗುತ್ತೆ ? ನಿನಗೊಂದು ಬಿಳೀ ಸೀರೆ, ನನ ಗೊಂದು ಬಿಳೀ ಪಾಯಜಾಮ—ಬಿಳೀ ಶರಟು....ಇನ್ನೂ ಒಂದು ಆರೇಳು ರೂಪಾಯಿಯಾದರೂ ಬೇಕು...."

"ಹೂಂ"

ಶಾರದಾ, ತುಂಬಿದ ಕಣ್ಣುಗಳಿಂದ ತಮ್ಮನನ್ನೇ ನೋಡಿದಳು. ಕಾಹಿಲೆ ಬಿದ್ದು ಎದ್ದವನು ಎಷ್ಟು ಕೃಶನಾಗಿದ್ದಾನೆ! ಪುನಃ ಆ ದೇಹ ತುಂಬಿ ಕೊಳ್ಳಬೇಕು. ಶಾಲೆ ಪುನಃ ಆರಂಭವಾಗುವುದರೊಳಗಾದರೂ ನಾಣಿ ಮೈ ತುಂಬಿಕೊಂಡಿರಬೇಕು....

ತನಗೆ ಬೇರೊಂದು ಕೆಲಸ ಸಿಗಬೇಕು; ತಾನು ಸಂಪಾದಿಸಬೇಕು. ..

ಆ ಮೇಲೆ ಬಿಳಿಯ ಸೀರೆ, ಬಿಳಿಯ ಶರಟು, ಬಿಳಿಯ ಪಾಯ ಜಾಮ........!

---

೧೫ ಮೇ ೧೯೫೧.